


# ಹಿಂಗಾರ



ಅರೆಬಾಸೆ ತ್ರೈಮಾಸಿಕ

ಸಂಪುಟ : 5 ಸಂಚಿಕೆ : 2

ದಿನಾಂಕ : 30-06-2022 ಬೆಲೆ : ರೂ. 20

ಸ್ವಾತಂತ್ರ್ಯದ ಅಮೃತ ಮಹೋತ್ಸವ






ಕರ್ನಾಟಕ
ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ




ಶ್ರೀ ಬೆಳೂರು ಸುದರ್ಶನವು ಡಿಜಿಟಲ್ ಪುಸ್ತಕಗಳ್ನ ಲೋಕಾರ್ಪಣೆ ಮಾಡಿ ಮಾತನಾಡ್ದು




ಜಂಭರದ ನೆಂಟ್ರಾದ ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷರ್ ಕೇಶವ ಕಾಮತ್‌ವು ಮಾತನಾಡ್ದು




ಜಂಭರದ ನೆಂಟ್ರಾದ ಕೊಡಗು ಗೌಡ ಸಮಾಜಗಳ ಒಕ್ಕೂಟದ ಅಧ್ಯಕ್ಷರ್ ಸೂರ್ತಲೆ ಸೋಮಣ್ಣನವು ಮಾತನಾಡ್ದು

## ಹಿಂಗಾರ ತ್ರೈಮಾಸಿಕ





ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**
**ಮಡಿಕೇರಿ**

# ಹಿಂಗಾರ

**ಅರೆಭಾಷೆ ತ್ರೈಮಾಸಿಕ**

ಸಂಪುಟ : 5 ಸಂಚಿಕೆ : 2

ದಿನಾಂಕ : 30–6–2022 ಕೊಡಗು ರೂ. 20

ಪ್ರಧಾನ ಸಂಪಾದಕರ್
**ಲಕ್ಷ್ಮೀನಾರಾಯಣ ಕಜೆಗದ್ದೆ**

ಸಂಪಾದಕರ್
**ಡಾ. ದಯಾನಂದ ಕೆ.ಸಿ., ಕೂಡಕಂಡಿ**

ಸಹಸಂಪಾದಕರ್
**ಪುರುಷೋತ್ತಮ ಕಿರ್ಲಾಯ**

| | |
|---|---|
| **HINGARA** | **ಹಿಂಗಾರ** |
| A Quarterly Magazine | ತ್ರೈಮಾಸಿಕ ಪತ್ರಿಕೆ |
| Published by | ಪ್ರಕಾಶಕರು |
| **Karnataka Arebhase Samskruthi** | **ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು** |
| **Mathu Sahitya Academy** | **ಸಾಹಿತ್ಯ ಅಕಾಡೆಮಿ** |
| Coffee Krip, 1st Floor | ಕಾಫಿ ಕೃಪಾ, ಒಂದನೇ ಮಹಡಿ, |
| Rajaseat Rd, Madikeri - 571 201 | ರಾಜಸೀಟ್ ರಸ್ತೆ, ಮಡಿಕೇರಿ–571201 |
| Ph : 08272-223055 | ದೂರವಾಣಿ : 08272–223055 |
| arebaseacademy@gmail.ocm | arebaseacademy@gmail.ocm |
| www.arebaseacademy.com | www.arebaseacademy.com |
| Chief Editor | ಪ್ರಧಾನ ಸಂಪಾದಕರ್ |
| **Lakshminarayana Kajegadhe** | **ಲಕ್ಷ್ಮೀನಾರಾಯಣ ಕಜೆಗದ್ದೆ** |
| Editor | ಸಂಪಾದಕರ್ |
| **Dr. Dayananda Kudakandi** | **ಡಾ. ದಯಾನಂದ ಕೆ.ಸಿ., ಕೂಡಕಂಡಿ** |
| Managing Editor | ವ್ಯವಸ್ಥಾಪಕ ಸಂಪಾದಕರ್ |
| **Chinnaswamy** | **ಚಿನ್ನಸ್ವಾಮಿ** |
| Sketches | ರೇಖಾಚಿತ್ರ |
| **Sathish B.R.** | **ಸತೀಶ್ ಬಿ.ಆರ್.** |
| Cover Page Photo | ಮುಖಪುಟ ಚಿತ್ರ |
| **Shashi Photogenics, Sullia** | **ಶಶಿ ಪೊಟೋಜೆನಿಕ್ಸ್, ಸುಳ್ಯ** |
| Printed at | ಮುದ್ರಣ |
| **Aakrithi Prints** | **ಆಕೃತಿ ಪ್ರಿಂಟ್ಸ್** |
| Mangaluru | ಮಂಗಳೂರು |
| Ph. 0824-2972002 | ದೂರವಾಣಿ : 0824–2972002 |
| Pages : 80 | ಪುಟಗಳು : 80 |
| Copies : 1900 | ಪ್ರತಿಗಳು : 1900 |
| Vol : 5 - 2 | ಸಂಪುಟ 5 ಸಂಚಿಕೆ 2 |
| Period : April to June 2022 | ಎಪ್ರಿಲ್ – ಜೂನ್ 2022 |
| Price : Rs. 20 | ಬೆಲೆ : ರೂ. 20/– |
| 3 year subscription : | ತ್ರೈವಾರ್ಷಿಕ ಚಂದಾ : |
| Rs. 200 | ರೂ. 200 |



# ಅಧ್ಯಕ್ಷರ ಮಾತ್

ಎಲ್ಲವುಕೆ ನಮಸ್ತೆ

ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ಹುಟ್ಟಿಕಂಡ್ ಹತ್ತ್ ವರ್ಸಲಿ ಸಾಕಸ್ಟ್ ಕೆಲ್ಸಗಳ ಅಕಾಡೆಮಿ ಮಾಡ್ತಾ ಬಂದುಟ್ಟು. ಒಂದು ಪ್ರಾದೇಸಿಕ ಬಾಸೆಲಿ ಶೈಕ್ಷಣಿಕ ಕೆಲ್ಸಗ ಜಾಸ್ತಿ ಆದ ಹಂಗೆನೆ ಆ ಬಾಸೆನ ಸ್ಥಾನಮಾನ ಹೆಚ್ಚ್ ಆದೆ. ಈ ವರ್ಸ ಕರ್ನಾಟಕ ಸರ್ಕಾರ ಬಜೆಟ್ಲಿ 'ಅರೆಭಾಷೆ ಸಂಶೋಧನಾ ಕೇಂದ್ರ'ನ ಮಂಗಳೂರು ವಿಶ್ವವಿದ್ಯಾಲಯಲಿ ಮಾಡುವೆ ಅಂತಾ ಘೋಷಣೆ ಮಾಡಿಟು. ಇದ್ ಬಾಸೆಗೆ ಸಿಕ್ಕಿದ ಒಂದು ದೊಡ್ಡ ಅವಕಾಸ. ಇದರ ಮುಂದಿನ ದಿನಲಿ ನಾವ್ ಸರಿಯಾಗಿ ಬಳ್ಸಿಕಂಡರೆ ಬಾಸೆ ಮತ್ತೆ ಸಂಸ್ಕೃತಿಗೆ ಸಂಬಂಧ ಪಟ್ಟಂಗೆ ದೊಡ್ಡ ಮಟ್ಟದ ಕೆಲ್ಸ ಮಾಡಕ್.

ಅರೆಬಾಸೆಗೆ ಅಕಾಡೆಮಿ ಮತ್ತೆ ಸಂಶೋಧನಾ ಕೇಂದ್ರದ ಸ್ಥಾನಮಾನ ಸಿಕ್ಕಿಟ್ಟು ನಿಜ. ಆದರೆ ISO (International Organisation of standardization for language) ಸ್ಥಾನಮಾನ ಇನ್ನ್ ಕೂಡಾ ಸಿಕ್ಕಿತ್ಲೆ. ಹಂಗಾಗಿ ನಾವು ಈ ಸ್ಥಾನಮಾನ ಪಡಿಯೋಕೆ ಕಳ್ದ ಎರಡ್ ವರ್ಸಲಿ ಬಾಸೆನ ಹಲವು ಮಾಧ್ಯಮಲಿ ತರುವ ಕೆಲ್ಸನ ಮಾಡ್ತಾ ಒಳೊ. ಅದರ್ಲಿ ಮುಖ್ಯಪಟ್ಟದ್ ಅರೆಬಾಸೆಲಿ ನಾಟಕ ನಿರ್ಮಾಣ, ಅರೆಬಾಸೆಲಿ ಯಕ್ಷಗಾನ, ಅರೆಬಾಸೆಲಿ ಗಮಕ, ಅರೆಬಾಸೆಲಿ ಸುಗಮ ಸಂಗೀತ, ಅರೆಬಾಸೆ ಪದಕೋಶ, ಅರೆಬಾಸೆ ವಿಶ್ವಕೋಶ, ಅರೆಬಾಸೆ ಪಾರಂಪರಿಕ ವಸ್ತುಕೋಶ, ಡಾಕ್ಯುಮೆಂಟರಿ ನಿರ್ಮಾಣ, ಚಿತ್ರಕಲಾ ಶಿಬಿರ, ಅರೆಬಾಸೆ ಪುಸ್ತಕಗಳ ಡಿಜಿಟಲೀಕರಣ, ಪತ್ರಿಕೆಲಿ ಬಾಸೆ ಮತ್ತೆ

ಸಂಸ್ಕೃತಿಗೆ ಸಂಬಂಧಪಟ್ಟ ಬರವಣಿಗೆಗ, ಸಾಮಾಜಿಕ ಜಾಲತಾಣಲಿ ಬಾಸೆ ಬಗ್ಗೆ ಉಪನ್ಯಾಸ ಹಿಂಗೆ ಬೇರೆ ಬೇರೆ ಆಯಾಮಲಿ ಕೆಲ್ಸ ಮಾಡಿ ಅದರ ದಾಖಲೆಗಳ ನಾವು ಸಂಬಂಧಪಟ್ಟವುಕೆ ಕಳ್ಸಿ ಕೊಡ್ತಾ ISO ಕೆಲ್ಸ ಮಾಡ್ತಾ ಒಳೊ. ಮುಂದಿನ ದಿನಲಿ ಬಾಸೆಗೆ ISO ಸ್ಥಾನಮಾನ ಸಿಕ್ಕಿರೆ ಅಂತರಾಷ್ಟ್ರೀಯ ಮಟ್ಟಲಿ ಬಾಸೆ ಗುರ್ತಿಸಿಕಂಡದೆ. ಆಗ ಭಾಷಾ ವಿಜ್ಞಾನ ಕ್ಷೇತ್ರಲಿ ಮುಂದಿನ ದಿನಲಿ ತುಂಬಾ ಕೆಲ್ಸ ಮಾಡಿಕೆ ಆದೆ. ಹಂಗಾಗಿ ಈ ಒಂದ್ ದೂರದೃಷ್ಟಿ ಇಟ್ಕಂಡ್ ನಾವ್ ನೀವ್ ಎಲ್ಲ ಸೇರಿಕಂಡ್ ಈ ಕೆಲ್ಸನ ಮಾಡೊಕಾದ ದೊಡ್ಡ ಜವಾಬ್ದಾರಿ ನಮ್ಮ ಮೇಲೆ ಉಟ್ಟು. ಇದ್ ಇಸ್ಟ್ ವಿಸಯ ಅವ್ವ ಬಾಸೆನ ಬಗ್ಗೆ. ಆದರೆ ಕಡೆಗೆ ಎರಡ್ ಮಾತ್ ಅವ್ವ ನೆಲದ ಬಗ್ಗೆ:– ಅರೆಬಾಸಿಗರ್ ಹೆಚ್ಚ್ ನೆಲ್ಸಿರುವ ಊರ್ ಕೊಡಗ್ ಮತ್ತೆ ದ.ಕ. ಜಿಲ್ಲೆ. ಈ ಎರಡ್ ಊರ್ಲಿ ಮಳೆಗಾಲ ಅಂತಾ ಹೇಳ್ರೆ ಜೆನಗಳಿಗೆ ಬಾರಿ ಕುಸಿ. ಮಳೆಗಾಲ ಹಳ್ಳದ ನೀರ್ಲಿ ಬರುವ ಮೀನ್ ಹಿಡ್ದ್ ಗೈಪು ಮಾಡ್ದು, ಏಡಿ ಹಿಡಿಯಕ್ಕೆ ಹೋದು, ಕಾಡ್ಗೆ ಹೋಗಿ ಮರಕೆಸ ತಂದ್ ಪತ್ರೊಡೆ ಮಾಡ್ದು, ಅಣಬೆ ಹುಡ್ಕಿಂಕಂಡ್ ಕಾಡ್, ತೋಟಕ್ಕೆ ಹೋದು ಈ ಎಲ್ಲಾ ಗಮ್ಮತ್ ಊರ್ಲಿ ಇರ್ವವವುಕೆ ಮಾತ್ರ. ನಗರ ಸೇರ್ದವು ಈ ಗಮ್ಮತ್ ಕುಸಿನ ನೆನ್ಸಿಕಂಡ್ ಸೋಷಿಯಲ್ ಮೀಡಿಯಾಲ್ಲಿ ಪಟ ಹಾಕುದು, ನಾಕ್ ಲೈನ್ ಬರ್ಕಾಂದು ಮಾಡಿಕಂಡ್ ಮಳೆ ಸಮಯಲಿ ಕುಸಿ ಪಡ್ತಾ ಇದ್ದೊ.

ಆದರೆ 2018ರ ಮೇಲೆ ನಮ್ಮ ನಮ್ಮ ಊರ್‌ಲಿ ಮಳೆಗಾಲ ಬಾಕನ ಮಳೆನ ಹೆದ್ರಿಕಂಡ್ ನೋಡುವ ಹಂಗೆ ಆವುಟು. ಇದ್ಕೆಲ್ಲ ಕಾರಣ ನಾವ್ ಮಾಡ್ದ ತೊಪ್ಪುಗ ಅಂತಾನೂ ನಾವ್ಗೆ ಗೊತ್ತುಟ್ಟು. ಹೆಂಗೆ ನಾವು ನಮ್ಮ ಅವ್ವಬಾಸೆನ ಬಗ್ಗೆ ಪ್ರೀತಿ ಇಸಿಕಂಡ್ ಕೆಲ್ಸ ಮಾಡುವೆನೋ ಹಂಗೆನೆ ನಾವು ನಮ್ಮ ನಮ್ಮ ಅವ್ವ ನೆಲದ ಬಗ್ಗೆನೂ ಪ್ರೀತಿ ಇಸಿಕಂಡ್ ಕೃಸಿ ಕೆಲ್ಸ ಮಾಡಿಕಂಡ್ ಬದ್ಕೊಮಾ ಅಂತಾ ಹೇಳಿಕಂಡ್ ನನ್ನ ಮಾತ್ ಮುಗ್ಸಿನೆ.

**ಲಕ್ಷ್ಮೀನಾರಾಯಣ ಕಜೆಗದ್ದೆ**



# ಸಂಪಾದಕೀಯ

ಅರೆಬಾಸೆನ ಹಿಂಗಾರ ತ್ರೈಮಾಸಿಕ ಪುಸ್ತಕನ ಓದ್‌ವ ಪ್ರೀತಿಯ ಎಲ್ಲ ಅರೆಬಾಸೆ ಓದ್‌ಗರಿಗೆ ನಮಸ್ಕಾರಗ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಈ ಅವದಿ ಮುಗಿಯಾಕೆ ಆಗ್‌ತಾವುಟ್ಟು. ಅಕಾಡೆಮಿನವು ಈ ಅವದಿಲಿ ಇಟ್ಟ್ ಕಂಡಿದ್ದ ಗುರಿಗಳ್‌ನ ಮುಟ್ಟಕೆ ನಿಮ್ಮೆಲ್ಲ ಸಹಾಯಂದ ಪ್ರಯತ್ನ ಪಡ್‌ತಾವೊಳೊ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿಂದ ಹೊರತರ್‌ತ್ತಿರ್‌ವ ಹಿಂಗಾರ ತ್ರೈಮಾಸಿಕನ ಚಂದದಾರ್‍ರಾಗಿ, ನಿರಂತರಾಗಿ ಓದಿಕಂಡ್ ಮೌಲ್ಯದ ಬರಹಗಳ್ನ ಮತ್ತೆ ಒಳ್ಳ ಸಲಹೆಗಳ್ನ ಕೊಟ್ಟ್ ಸಹಕರಿಸ್ತಿರ್‌ವ ನಿಮಿಗೆ ಹೃದಯ ತುಂಬಿದ ಧನ್ಯವಾದಗ.

ಈ ಹಿಂಗಾರ ತ್ರೈಮಾಸಿಕ ಪುಸ್ತಕ ಐದನೆ ಸುಂಪುಟದ ಎರಡನೆ ಸಂಚಿಕೆ. ಈ ಸಂಚಿಕೆಲಿ 2022ರ ಏಪ್ರಿಲ್‌ಂದ ಜೂನ್ ತಿಂಗಳ ಕೊನೆವರೆಗೆ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ನಡ್‌ಸಿದ ಕಾರ್ಯಕ್ರಮಗಳನ್ನ ಸಂಕಲಿಸ್ಯೊಳೊ.

ಈ ಸಂಚಿಕೆಲಿ ವ್ಯಕ್ತಿ ಪರಿಚಯ ವಿಭಾಗಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಗೌರವ ಪ್ರಶಸ್ತಿನ ವಿಜೇತರ್ ವಿದ್ವಾನ್ ಟಿ.ಜಿ.ಮುಡೂರುವು 2022ರ ಏಪ್ರಿಲ್ 20ರಂದ್ ವಿಧಿವಶ ಆದ. ಈ ಸಂಚಿಕೆಲಿ ಅವ್ರ ಸಣ್ಣ ಪರಿಚಯನ ಓಂಶ್ರೀ ದಯಾನಂದ ಕೂಡಕಂಡಿಯವು ಮಾಡ್ಯೊಳೊ. ಸಂಸ್ಕೃತಿ ದರ್ಪಣ ವಿಭಾಗಲಿ ಹೊಸೋಕ್ಲು ಮೋಕ್ಷಿತ್ ಅವು ಬರ್ದ ಅರೆಭಾಷಿಗರ ಮದುವೆ ಜಂಭರಲಿ 'ಹೆಣ್ ಗಂಡ್ ವಯಿಸಿ ಕೊಡ್‌ವ ಪದ್ದತಿ'ನ, ಕಡ್ಯದ ಪಾರ್ವತಿ ಕೃಷ್ಣಪ್ಪವು ಬರ್ದ 'ಪಂಡ್‌ನ ಕಾಲದ ಆಗೆ–ನಾಟಿ ಕೆಲ್‌ಸ'ನ ಮತ್ತೆ ಸಿಂಚನವು ಬರ್ದ 'ಕಾರ್ತಿಂಗಳ ಹರಕೆ' ಕೊಡ್‌ದರ ಬಗ್ಗೆ ಈ ಸಂಚಿಕೆಲಿ ಪರಿಚಯಿಸ್ಯೊಳೊ. ಪುಸ್ತಕ ವಿಮರ್ಶೆ ವಿಭಾಗಲಿ ಬಾರಿಯಂಡ ಜೋಯಪ್ಪವು ಬರ್ದ 'ಚೆಂಚಿ'ತೇಳ್‌ವ ಪುಸ್ತಕನ ಪಿ.ಜಿ.ಅಂಬೆಕಲ್‌ವು ವಿಮರ್ಶೆ ಮಾಡ್ಯೊಳೊ.

ಕಥಾಜೊಂಪೆ ವಿಭಾಗಲಿ ಕಾಳೆಯಂಡ ತಂಗಮ್ಮ ಅಪ್ಪಚ್ಚವು ಬರ್ದ 'ಏಡಿರಾಯನ ಕಥೆ', ಹಾಸ್ಯ ವಿಭಾಗಲಿ ಕಾವೇರಿಮನೆ ಪ್ರೊ. ಬೋಜಪ್ಪವು ಬರ್ದ

‘ನಮ್ಮಮ್ಮನ ಸೀರೆ ಸೆರ್ಗ್‌ನ ಪ್ರತಾಪ ಕೇಳ್‌ರೊಪ್ಪೋ–ಕೇಳಿ’ ತೇಳುವ ಶೀರ್ಷಿಕೆಲಿ ಬರ್ದ ಹಾಸ್ಯದ ಚುಟುಕುನ, ಹಾಂಗೆ ಪುರಾಣ ಕಥಾ ಜೊಂಪೆಲಿ ಎಂ.ವಿ.ಮೋಹನ್ ಅವು ಬರ್ದ ‘ಇತಿಹಾಸದ ಬೆಳಕ್‌ಲಿ ಕೊಡಗ್‌ನ ಕಾವೇರಿ’ ತೇಳ್‌ವ ಕಥೆನ ಮತ್ತೆ ಕುಂಞೇಟಿ ಶಿವರಾಮ ಗೌಡ(ವ್ಯಾಸ)ರ ‘ಯಕ್ಷ ಪ್ರಶ್ನೆ’ ತೇಳ್‌ವ ಕಥೆಗಳ್‌ನ ಪ್ರಕಟಿಸ್ಯೊಯೊ.

ಆರೋಗ್ಯ ದರ್ಪಣಲಿ ಡಾ ನಿವೇದಿತಾ ಎ.ಪಿ.ಯವು ಬರ್ದ ‘ಮಕ್ಕಳ್ಲಿ ರೋಗ ನಿರೋಧಕ ಶಕ್ತಿ ಹೇಂಗೆ ಹೆಚ್ಚಿಸುದು’ ತೇಳುವ ಲೇಖನನ ಹಾಕ್ಯೊಯೊ. ಬನ್ನಿ ಓದೋಮ ತೇಳುವ ಅಂಕಣಲಿ ಶ್ರೀನಿವಾಸ ವೈದ್ಯರ ‘ಇನ್ನೊಂದು ಸಂತೆ’ ತೇಳುವ ಪುಸ್ತಕದ ಒಂದ್ ತುಣುಕ್‌ನ ಪ್ರಕಟಿಸ್ಯೊಯೊ.

ಕವನ ವಿಭಾಗಲಿ ಕೋಳಿಮಾಡು ದರ್ಶನ್‌ವು ಬರ್ದ ‘ಕಾರ್ತಿಂಗ ಸುರು ಆಕನ...’, ಪಟ್ಟಡ ಪ್ರಭಾಕರ್ ಅವು ಬರ್ದ ‘ಗೌಡ ರೈತನ ದಿನಚರಿ’, ಲಲಿತಾ ಕಟ್ರತನ ಅವ್ರ ‘ಜೀವನಚಕ್ರ’ ಮತ್ತೆ ಶರಣ್ಯ ಕೋಲ್ಚಾರ್ ಅವ್ರ ‘ಗೂಡೆನ ಬಾಳು’ ತೇಳುವ ಕವನನ ಪ್ರಕಟಿಸ್ಯೊಯೊ.

ಅಕಾಡೆಮಿನ ವತಿಂದ ನಡ್ದ ಅರೆಬಾಸೆ ಪ್ರಬಂಧ ಸ್ಪರ್ಧೆಲಿ ಮೊದಲ್‌ನೆ ಇನಾಮ್ ತಕಂಡ ಲೀಲಾ ದಾಮೋದರ ಅವ್ರ ‘ಇಂಚು’, ಎರ್‌ಡ್ನೆ ಇನಾಮ್ ತಕಂಡ ಕೊಟ್ಟಕೇರಿಯನ ಲೀಲಾದಯಾನಂದ ಅವ್ರ ‘ನಮ್ಮ ಕಾಲ್ ಮೇಲೆ ನಾವ್ ನಿಲ್ಲೊಕು!’ ಮತ್ತೆ ಮೂರ್ನೆ ಇನಾಮ್ ತಕಂಡ ವಿಶ್ವನಾಥ್ ಎಡಿಕೇರಿ ಅವ್ರ ‘ನಂಜನ ಹನಿಮೂನ್’ ತೇಳ್‌ವ ಪ್ರಬಂಧಗಳ್‌ನ ಪ್ರಕಟಿಸ್ಯೊಯೊ. ಕಣ್ಮರೆ ಆಗ್‌ತಿರ್‌ವ ‘ಮಂಜೆಟಿ ಮಣೆ(ಚೆನ್ನೆಮಣೆ)’ನ ಬಗ್ಗೆ ಮಾಹಿತಿನ ಎಂ.ಜಿ.ಕಜೆವು ಈ ಸಂಚಿಕೆಲಿ ಕೊಟ್ಟೊಯೊ.

ಈ ಸಂಚಿಕೆಲಿ ಪ್ರಕಟ ಆದ ಬರವಣಿಗೆಗೆ ಚಿತ್ರಕಲಾವಿದ ಸತೀಶ್.ಬಿ.ಆರ್ ಅವು ಗೆರೆಗಳ ಮೂಲಕ ಜೀವ ತುಂಬ್ಯೊಯೊ. ಸಂಚಿಕೆನ ಹೊರತಾಕೆ ಅಕಾಡೆಮಿನ ಅಧ್ಯಕ್ಷರ್, ಸಹ ಸಂಪಾದಕರ್, ಸರ್ವ ಸದಸ್ಯರ್ ಮತ್ತೆ ರಿಜಿಸ್ಟ್ರಾರ್ ಸಹಕರಿಸ್ಯೊಯೊ. ಬರಹಗಾರರ್ ತಮ್ಮ ಅಮೂಲ್ಯವಾದ ಬರವಣಿಗೆಗಳನ್ನ ನೀಡಿ ಸಂಚಿಕೆನ ಮೆರ್ಗ್‌ನ ಜಾಸ್ತಿ ಮಾಡ್ಯೊಯೊ. ಪ್ರತಿ ತಿದ್ದುವಲ್ಲಿ ಸಂಪಾದಕ ಮಂಡಳಿನ ಸಹಸಂಪಾದಕರಾದ ಪುರೊಷೋತ್ತಮ ಕಿರ್ಲಾಯವು ಹಾಂಗೇ ಎಲ್ಲ ಸದಸ್ಯರ್‌ಗ ಕೈ ಜೋಡಿಸ್ಯೊಯೊ. ಶಶಿ ಪೊಟೋಜೆನಿಕ್ಸ್, ಸುಳ್ಯ ಇವು ಕೊಟ್ಟ ಮಂಜೆಟಿ ಮಣೆ(ಚೆನ್ನೆಮಣೆ) ಚಿತ್ರನ ಮುಖಪುಟಲಿ ಹಾಕ್ಯೊಯೊ. ಆಕೃತಿ ಪ್ರಿಂಟ್ಸ್, ಮಂಗಳೂರು ಇವು ಲಾಯ್ಕಲಿ ಮುದ್ರಿಸಿ ಸಹಕರಿಸ್ಯೊಯೊ. ಸಂಚಿಕೆನ ಪ್ರಕಟಿಸಿಕೆ ಸಹಕರ್‌ಸಿದ ಎಲ್ಲವ್ಕೆ ಹೃದಯ ತುಂಬಿದ ಧನ್ಯವಾದಗಳ್‌ನ ಅರ್ಪಿಸಿನೆ.

ದಿನಾಂಕ: 30.6.2022

**ಡಾ. ದಯಾನಂದ ಕೂಡಕಂಡಿ**
ಸಂಪಾದಕರ್

ಪ್ರಕಟ ಆದ ಬರವಣಿಗೆಗೆ ಆಯಾ ಬರಹಗಾರರೆ ಜವಾಬ್ದಾರರ್

# ಹಿಂಗಾರ ಒಡ್ಸ್‌ಕನ




# ದಿವಂಗತ ವಿದ್ವಾನ್ ಟಿ.ಜಿ. ಮುಡೂರು ಅವ್ರ ಸಣ್ಣ ಪರಿಚಯ

● ಶ್ರೀಮತಿ ಓಂಶ್ರೀ ದಯಾನಂದ



ನಮ್ಮ ನಾಡ್ ಕಂಡ ಶ್ರೇಷ್ಠ ಚಿಂತಕ, ಸಾಹಿತಿ, ದೇಸೀ ಪ್ರತಿಭೆ, ವಿಶ್ವ ದೃಷ್ಟಿನ ಪ್ರತೀಕ, ಸಾಮಾಜಿಕ ಮತ್ತೆ ಸಾಂಸ್ಕೃತಿಕ ಪ್ರಜ್ಞೆಯ, ನೈತಿಕ ಸ್ಥೈರ್ಯದ ರೂಪಕ ವಿದ್ವಾನ್ ಟಿ.ಜಿ. ಮುಡೂರು. ಇವು ನವಂಬರ್ 24, 1927 ರಂದ್ ಕಾಸರಗೋಡು ಜಿಲ್ಲೆನ ಪಂಜಿಕಲ್ಲ್‌ನ ಹತ್ರದ ಮುಡೂರು ಎಂಬಲ್ಲಿ ಸುಬ್ಬಪ್ಪ ಗೌಡ ಮತ್ತೆ ಬಾಲಕ್ಕರ ಮಂಜನಾಗಿ ಹುಟ್ಟಿದೊ. ಇವರ ಅಮ್ಮ ಜಾನಪದ ಹಾಡ್ ಮತ್ತೆ ಕತೆಗಳ ಭಂಡಾರವಾಗಿದ್ದೊ, ಜೊತೆಲಿ ನಾಟಿ ವೈದ್ಯೆ ಕೂಡ ಹೌದ್.

ವಿದ್ವಾನ್ ಟಿ.ಜಿ.ಮುಡೂರುವು ಎಂ.ಎ ಮತ್ತೆ ಬಿ.ಎಡ್ ಪದವಿನ ಮೈಸೂರು ವಿಶ್ವವಿದ್ಯಾನಿಲಯಂದ ಮತ್ತೆ ಮದರಾಸು ವಿಶ್ವವಿದ್ಯಾನಿಲಯಂದ ಕನ್ನಡ ವಿದ್ವಾನ್ ಪದವಿನ ಪಡ್ಕೊಂಡೊ.

1948ರ್‌ಂದ 1982ರ ವರೆಗೆ ಪ್ರಾಥಮಿಕ, ಮಾಧ್ಯಮಿಕ ಮತ್ತೆ ಪ್ರೌಢಶಾಲೆಗಳ್‌ಲ್ಲಿ ಅಧ್ಯಾಪಕರಾಗಿ, ಮುಖ್ಯ ಅಧ್ಯಾಪಕರಾಗಿ, ಪದವಿ ಪೂರ್ವ ಮಹಾ ವಿದ್ಯಾಲಯಲಿ ಕನ್ನಡ ಬೋಧಕಾಗಿ ವೃತ್ತಿ ಜೀವನ ಮಾಡ್ಯೊಳೊ.

ಕೆಲ್ಸದೊಟ್ಟಿಗೆ 1948ರ್‌ಂದ ಬರಹ ಲೋಕಕ್ಕೆ ಕಾಲಿಟ್ಟ್, ಪತ್ರಿಕೆಲಿ, ಸಂಚಿಕೆಲಿ ಸಾಕಷ್ಟ್ ಬರವಣಿಗೆನ ಪ್ರಕಟಣೆ ಮಾಡ್ಯೊಳೊ. ಸಂಗಮ

ಕಲಾ ಸಂಘ ಕಲ್ಮಡ್ಕ, ಗೀತಾ ಪ್ರಕಾಶನ ಅಜ್ಜಾವರ, ಕಾಜಾಣ ಸಾಹಿತ್ಯ ಮಾಲೆ ಬೆಳ್ತಂಗಡಿ, ಪ್ರತಿಮಾ ಬಳಗ ಪಂಜ ಮೊದಲಾದವುಗಳ ನೇತೃತ್ವ ವಯಿಸಿಕಂಡ್ ಪ್ರಕಾಶನ ಮತ್ತೆ ರಂಗ ಚಟುವಟಿಕೆಗೆ ಚಾಲನೆ ಕೊಟ್ಟೊಳೊ.

ವಿದ್ವಾನ್ ಟಿ.ಜಿ. ಮುಡೂರುವು ಸಾಹಿತ್ಯ ಲೋಕಲಿ ಬಹಳಷ್ಟು ಕೆಲ್ಸ ಮಾಡ್ಯೊಳೊ. ಅವರ ಮುಖ್ಯ ಸಾಹಿತ್ಯ ಕೃಷಿಗ:

**ಕವನ ಸಂಕಲನಗ:** ಕಾಡ ಮಲ್ಲಿಗೆ, ಹೊಸತು ಕಟ್ಟು, ಕುಡಿ ಮಿಂಚು, ಪ್ರಗತಿಯ ಕರೆ

**ಕಾದಂಬರಿ/ಕಥಾ ಸಂಕಲನಗ:** ಅಬ್ಬಿಯ ಮಡಿಲು, ಕಣ್ ಕನಸು ತೆರೆದಾಗ

**ಗದ್ಯಾನುವಾದ:** ಜೀವ ದಯಾಷ್ಟಮಿ **ಪ್ರಬಂಧ ಲೇಖನ:** ಧಾರಾ ಪಯಸ್ವಿನಿ

**ಜಾನಪದ ಗೀತಾ ರೂಪಕ:** ಹೊಸಕೆರೆಯ ಹೊನ್ನಮ್ಮ

**ನಾಟಕಗ:** ಶಿವಕುಮಾರಿ, ಕೇರಳಕುಮಾರಿ, ಸಖಿ, ಅಚ್ಚರಿಯ ಅರಳೆಲೆ, ಮಾಧ್ಯಮಾ

**ಪ್ರಹಸನ:** ಇನ್ಸೂರಳಿಯ

**ಬಾನುಲಿ ರೂಪಕಗ:** ಹುತ್ತದಲ್ಲಿ ಹೂ, ದಯೆಯ ದಾಂಗುಡಿ, ಅಮರ ಕಲ್ಯಾಣ ಕ್ರಾಂತಿ

**ಛಂದೋ ನಾಟಕಗ:** ಮಕುಟೋರು ಭಂಗ, ಸಾವೊಲಿದ ಸಾವಿತ್ರಿ

**ಗೀತಾ ರೂಪಕಗ:** ಗುರುವಿನ ಗುಡಿ, ಸೊನ್ನೆಯಿಂದ ಸೊನ್ನೆಗೆ

**ಆಂಗ್ಲ ನಾಟಕದ ರೂಪಾಂತರ:** ಹೃದಯ ರೂಪಕ

**ಖಂಡಕಾವ್ಯಗಳು:** ಸಿಡಿಲ ಮರಿ ಅಶ್ವತ್ಥಾಮನ್, ಮೋಹನ ಮುರುಳಿ

**ಯಕ್ಷಗಾನ ಪ್ರಸಂಗ:** ಪ್ರಥಮ ಸ್ವಾತಂತ್ರ್ಯ ಸಮರ

**ಅರೆಭಾಷೆ ಕೃತಿ:** ಬೊಳ್ಪಾಕನ ಮುಗ್ತ್; **ಮುಕ್ತಕ:** ಬೆಳ್ಳಿ ಬೆಳಕು

**ಸಂಪಾದಿತ ಸ್ಮರಣ ಸಂಚಿಕೆಗ:** ಸ್ಪಂದನ, ಸ್ವರ್ಣ ಶಾರದೆ, ರಜತರಶ್ಮಿ, ಅಮೃತವಾಹಿನಿ

**ಹವಿ ಗನ್ನಡ:** ಒಪ್ಪಕುಂಞಿ

**ತುಳು ಯಕ್ಷಗಾನ ರೂಪಕ:** ಕೋಟಿ ಚೆನ್ನಯ್ಯ

**ತುಳು ಸಾಮಾಜಿಕ ಪ್ರಹಸನ:** ಜೋಕುಳೆ ಬುದ್ಧಿ.

ಹೀಂಗೆ ಕನ್ನಡ, ತುಳು, ಅರೆಭಾಷೆಲಿ ಸಾಹಿತ್ಯ ಕ್ಷೇತ್ರದ ಬೇರೆ ಬೇರೆ ಬಗೆನ ಬಹಳಷ್ಟ್ ಕೃಷಿನ ಇವು ಮಾಡ್ಯೊಳೊ.

ಜಾಗೀರ್‌ದಾರ್ ಜಗ್ಗೆ, ಗ್ರಾಜ್ಯುವೇಟ್ ಗಿರಿಜ, ಸೀನನ ಸಿನೆಮೊ, ಗಟ್ಟ್ಯಾಂಡ ರೊಟ್ಟಿ ತೆಲುಪಪಾಂಡ ತೆಲ್ಲವು, ದೂರೊದಕುಕ್ಕು ಮುಟ್ಟದ ಅಂಬಟೆ, ಗಡಿಬಿಡಿ ಗಂಗಯ್ಯೆ, ಕೆಡ್ಡಸೊ,ಬಲಿ ಪರ್ಬೊ, ಸುಗ್ಗಿ ಪುಣ್ಣಮೆ ತೇಳುವ ಜಾನಪದ ಗೀತಾ ರೂಪಕಗ ಇವರ ಅಪ್ರಕಟಿತ ತುಳು ಭಾಷೆನ ಕೃತಿಗ.

ವಿದ್ವಾನ್ ಟಿ.ಜಿ.ಮುಡೂರುವು ಕನ್ನಡ ಸಾಹಿತ್ಯ ಪರಿಷತ್‌ನ ಜಿಲ್ಲಾ ಘಟಕ ಸುರು ಆದಲಿಂದ ಸುಳ್ಯ ತಾಲ್ಲೂಕ್‌ನ ಪ್ರತಿನಿಧಿ ಆಗಿ 15 ವರ್ಷಗಳ ಕಾಲ ಮತ್ತೆ ಸುಳ್ಯ ತಾಲ್ಲೂಕು ಘಟಕ ಆದ ಮೇಲೆ ಕನ್ನಡ ಸಾಹಿತ್ಯ ಪರಿಷತ್ತಿನ ಸುಳ್ಯ ತಾಲ್ಲೂಕು ಘಟಕದ ಅಧ್ಯಕ್ಷರಾಗಿ 1992ರ್‌ಂದ 1996ರ ವರೆಗೆ ಕೆಲ್ಸ ಮಾಡ್ಯೊಳೊ. ಸುಬ್ರಹ್ಮಣ್ಯ, ಪಂಜ, ಅಡ್ಕಾರುಗಳಲ್ಲಿ ತಾಲ್ಲೂಕು ಕನ್ನಡ ಸಾಹಿತ್ಯ ಸಮ್ಮೇಳನ, ಸುಳ್ಯಲಿ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಸಂಘಟಕರಾಗಿ ಕೆಲ್ಸ ಮಾಡ್ಯೊಳೊ. ಮತ್ತೆ ಸುಳ್ಯಲಿ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಕೊಂಬೋಲಗ ಧಾರಾ ಪಯಸ್ವಿನಿನ ಪ್ರಕಟಿಸ್ಯೊಳೊ. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷತೆ ತೆರವು ಆದ ವರ್ಷ ಅರಂತೋಡುಲಿ ನಡ್ದ ತಾಲ್ಲೂಕು ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆನ ವಯಿಸಿದೊ.

ವಿದ್ವಾನ್ ಟಿ.ಜಿ.ಮುಡೂರುವು ಕನ್ನಡ ಸಾಹಿತ್ಯ ಪರಿಷತ್ತ್‌ನ ತಾಲೂಕು ಮತ್ತೆ ಜಿಲ್ಲಾ ಸಮ್ಮೇಳನಗಳ್‌ಲಿ ಸನ್ಮಾನ ಪಡ್ಕೊಂಡೊಳೊ. ತಾಲೂಕು ಮತ್ತೆ ಜಿಲ್ಲಾ ಮಟ್ಟಲಿ ರಾಜ್ಯೋತ್ಸವ ಸನ್ಮಾನ ಪ್ರಸಸ್ತಿಗಳ್‌ನ್ನ ಪಡ್ಕೊಂಳೊ. ಗುರುದೇವ ಲಲಿತ ಕಲಾ ಮಂಡಳಿ ಮಂಡ್ಯ ಮತ್ತೆ ತಾಲೂಕು ವಲಯದ ಸಂಘ ಸಂಸ್ಥೆಗಳ್‌ಲಿ ಸನ್ಮಾನನ ಸ್ವೀಕರಿಸ್ಯೊಳೊ. ಅರೆಭಾಷೆ ಸಾಹಿತ್ಯ ಮತ್ತೆ ಸಂಸ್ಕೃತಿಲಿ ಇವರ ಸೇವೆನ ಮನಗಂಡ್ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಗೌರವ ಪ್ರಸಸ್ತಿನ ಪಡ್ಕೊಂಡೊಳೊ. ಹೀಂಗೆ ವಿದ್ವಾನ್ ಟಿ.ಜಿ.ಮುಡೂರುವು ಲೆಕ್ಕ ಇಲ್ಲದಷ್ಟ್ ಸನ್ಮಾನಗಳ್‌ನ, ಗೌರವಗಳ್‌ನ ಬ್ಯಾರೆ ಬ್ಯಾರೆ ಸಂಘ ಸಂಸ್ಥೆಗಳ್‌ಂದ ಪಡ್ಕೊಂಡೊಳೊ.

ವಿದ್ವಾನ್ ಟಿ.ಜಿ.ಮುಡೂರುವು ಸೇವೆಂದ ನಿವೃತ್ತಿ ಆದ ಮ್ಯಾಲೆ ಪಂಜ ಬಾಪೂಜಿ ಸೇವಾಶ್ರಮ ಪಂಜ, ಸಾರ್ವಜನಿಕ ಆರಾಧನ ಸಮಿತಿ ಪಂಜಲಿ ಯುವ ಜರರೊಟ್ಟೊಗೆ ಸಾಹಿತ್ಯ, ಸಾಂಸ್ಕೃತಿಕ ಮತ್ತೆ ಶೈಕ್ಷಣಿಕ ಚಟುವಟಿಕೆಲಿ ವಿಶ್ರಾಂತಿ ಜೀವನನ ನಡ್ಸಿಕಂಡ್, ಸಣ್ಣ ಕೃಷಿ ಹಿಡ್‌ವಳಿದಾರ ಆಗಿ ನೆಲ್ಸಿದೊ. ತೊಂಬತ್ತೈದ್ ವರ್ಷ ತುಂಬು ಜೀವನನ ನಡ್ಸಿ, ಏಪ್ರಿಲ್ 20,2022ರಂದ್ ವಿಶ್ರಾಂತ ಲೋಕಕ್ಕೆ ಹೋದೊ.

---

**ಶ್ರೀಮತಿ ಓಂಶ್ರೀ ದಯಾನಂದ**
ಕೂಡಕಂಡಿ, ಮಡಿಕೇರಿ
ಮೊಬೈಲ್ ಸಂಖ್ಯೆ: 6363376487




# ಹೆಣ್ಣ್ ಗಂಡ್ ವಯಿಸಿ ಕೊಡುವ ಪದ್ಧತಿ

● ಹೊಸೋಕ್ಲು ಮೋಕ್ಷಿತ್ ತಿಮ್ಮಯ್ಯ

॥ ಶ್ರೀ ಕುಲದೇವತಾ ಪ್ರಸನ್ನ ॥

ಸಭೆಕರೇ ನಮಸ್ಕಾರ. ನಾನ್ ಹೇಳ್‌ವ ಮಾತ್‌ನ ಮನ್‌ಸಿಟ್ಟ್ ಕೇಳಿ. ತಪ್ಪುಗ ಇದ್ದರೆ ಸರಿಪಡ್ಸಿಕಣಿ.

ಪರಮ ವೈಭವಗಳ್‌ಂದ ಇಷ್ಟಮಿತ್ರರ ಜೊತೆಗೂಡಿ ಸೀತಾವಳಿ ಚಪ್ಪರದ ಮೇಲ್‌ಕಟ್ಟ್‌ಡಿಲಿ ಸಾಲುಗಟ್ಟಿ ನಿಂತವರಲ್ಲಿ ದಿಬ್ಬಣ ಮುಖ್ಯಸ್ಥರಾದ ಮಹಾನೀಯರ್ ಯಾರಯ್ಯ...? ನಾನಯ್ಯ

ಹಾಂಗರೇ ನೀವ್ ಯಾವ ಊರ್, ಯಾವ ಗ್ರಾಮ, ಯಾರ ಮನೆಂದ ಡಿಬ್ಬಣಾಡಿ ಬಂದೊಳಿರಿ. ನಿಮ್ಮ ಹೆಸ್ರ್ ಎಂತಾ...?

ನಾನ್ ಬಲ್ಲಮೊವಟಿ ಗ್ರಾಮ ಹೊಸೋಕ್ಲ್ ಮನೆಂದ ದಿಬ್ಬಣಾಡಿ ಬಂದೊಳೆ. ನನ್ನ ಹೆಸ್ರ್ ಮಾಚಯ್ಯ

ಹಾಂಗರೆ ನಮ್ಮ ಪೂರ್ವ ಪದ್ಧತಿಯಾಂಗೆ ವಿಜ್ಞಾಪನೆಗಳ ಸ್ವೀಕರಿಸಿ ತಮ್ಮಯ್ಯ ಅಂತ ಹೇಳ್‌ವ ಹೈದಂಗೆ ಬನ್ನಿ ಎಂಬ ಗೂಡೆನ ಈ ಹಿಂದೆ ಮಾತ್‌ಕತೆ ನಡ್ಸಿ ಉಭಯ ಸಮಸ್ತರ್, ಬಂದ್‌ಮಿತ್ರರ್, ಇಷ್ಟಮಿತ್ರರ್ ಜೊತೆಗೂಡಿ ಕಾಗದ ಪತ್ರಿಕೆಯಿಂದಲೋ ಕರ್ಸಿ ಆಕಾಶದಷ್ಟ್ ದೊಡ್ಡ ಚಪ್ಪರ ಹಾಕಿ ಭೂಮಿಯಷ್ಟ್ ದೊಡ್ಡ ಹಸೆ ಬರ್‌ದ್ ರತ್ನಖಚಿತ ಆದ ಮಂಟಪಲಿ ಅಗ್ನಿಸಾಕ್ಷಿಯಾಗಿ ಧಾರೆ ಎಳ್‌ದ್ ಕೊಟ್ಟೋಳೋ ಅಲಾ...

ಹೌದು...

ಹಾಂಗರೆ ನಿನ್ನೆಯ ದಿನ ಪುರುಷನ ಹೋಲುವ ಮನ್ಮಂಥಂಗೆ ಕನ್ನೆಯನ್ನು ಹೋಲುವ ರಥದೇವಿಗೆ ಪುರುಷ ಉಭಯ ಹಸ್ತಗಳ್‌ಂದ ಮಾಡ್ದ ಚಾರುಹಸ್ತಗಳಿಂದಾಗಲಿ ಯಾವುದೇ ಒಂದ್ ಲೋಪ ದೋಸ ಕಂಡ್ ಬಾತ್ಲೆ ತಾನೆ (ಇಲ್ಲೆ...)

ಹಾಂಗರೆ ನಮ್ಮ ಮುದ್ದು ಬಾಲಕಿನ ನಿಮ್ಮ ಸ್ವಾದಿನಕ್ಕೆ ಒಪ್ಪಿಸಿ ಕೊಡ್ತ ಒಳೊ. ಒಪ್ಪಿಸಿ ಕೊಡಕನ 12–12, 24 ವರಗಳ್‌ನ, ಉಡಿಕೆ ಬಟ್ಟೆನ, ಹಾಕಣಿಕೆ ಚಿನ್ನದ ಆಭರಣಗಳನ್ನ, ಊಟ ಮಾಡಿಕೆ ಬೆಳ್ಳಿಯ ಬಟ್ಲ್‌ನ, ಮಲಗಿಕ್ಕೆ ಮಂಚನ, ಹಾಂಗೇ ಸೇವೆಗೆ ಯೋಗ್ಯರಾದ ದಶ–ದಶಿಯರನ್ನ ಬಳುವಳಿಯಾಗಿ ಕೊಟ್ಟೊಳೊ ಆಲಾ.... (ಹೌದು)

ಹಾಂಗೆ ಬಳುವಳಿಯಾಗಿ ಕೊಟ್ಟ ಐಶ್ವರ್ಯನ ಸೀಟಿ ಸಾಹುಕಾರಂಗೆ ಕೊಟ್ಟ್ 1ಕ್ಕೆ 10, 10ಕ್ಕೆ 100, 100ಕ್ಕೆ 1000ಗಟ್ಟ್‌ಲೆ ಅಭಿವೃದ್ಧಿಪಡಿಸಿ ಕೀರ್ತಿ ಗಳ್‌ಸುವ ಮಹನೀಯರ್ ಯಾರಯ್ಯ...? (ವರನಯ್ಯ)

ಹಾಂಗರೆ ನಮ್ಮ ಕೂಸ್‌ನ ಕಡೆ ನೆತ್ತಿ ಎಣ್ಣೆ ಆರ್‌ತ್ಲೆ. ಅಂಗೈಗೆರೆ ಮಾಸಿತ್ಲೆ; ಅಂಗಾಲ್‌ಗೆ ದೂಳ್ ಸೋಕಿತ್ಲೆ. ಹಾಸಿಗೆನ ಮಾಸಿದವಳಲ್ಲಾ ಹಟ್ಟಿ ಸೆಗಣಿ ಬಾಚಿದವಳಲ್ಲಾ. ಅಂಗಳಲಿ ಹಾಡಿ ತೊಟ್ಲ್‌ಲಿ ಮಾಲ್ಗಿಕೆ ಆಸೆ ಪಡುವ ನಮ್ಮ ಮುದ್ದು ಬಾಲಕಿನ ರಕ್ಷಿಸುವವರ್‍ಯಾರಯ್ಯ? (ವರನಯ್ಯ)

ಹಾಂಗರೆ ನಮ್ಮ ಮಗಳ್‌ಗೆ ಮಾವನವರ ಮನ–ಗುಣಗಳ ಬಗ್ಗೆ ಗೊತ್ಲೆ. ಅತ್ತೆ, ಅಮ್ಮನವರ ಅಡುಗೆ ಕೆಲಸಗಳ ಬಗ್ಗೆ ಗೊತ್ಲೆ. ಭಾವ–ಮೈದುನರ ಭಾವನೆಗ ಗೊತ್ಲೆ. ಅತ್ತಿಗೆ ನಾದಿನಿಯ ಹಂಗಿಗೆ ಒಳಪಟ್ಟತ್‌ಲೆ. ಕುಟುಂಬದವರ ಕೂಟಕ್ಕೆ ಸೇರಿದವಳಾದರೂ ಏನೊ ಕಲಾಹಗ ಬಂದರೆ ಅದರ ಉಪಸಮನ ಮಾಡಿ ರಕ್ಷಿಸುವವರ್‍ಯಾರಯ್ಯ? (ವರನಯ್ಯ...)

ಹಾಂಗರೆ ಇನ್ನೊ ಮುಂದೆ ವಧು–ಮಗಳು ಕಾವೇರಿ ತಾಯಿಯರ ಆಶೀರ್ವಾದಂದ, ವೆಂಕಟರಮಣ ಸ್ವಾಮಿಯ ಕೃಪಕಟಾಕ್ಷಂದ ಇಗ್ಗುತಪ್ಪ ದೇವರ ಹಾರೈಕೆಂದ ಕೂಡಿ ಬಾಳಲಿ ತಾ ಹಾರೈಸೋಣ.

10 ಕುಟುಂಬ 18 ಗೋತ್ರದ ಕುಲಸ್ತರ ಸಂಗಡಕೇರಿ ಎರಡು ಕೈನ ನಾಲ್ಕು ಕೈಗಳಾಗಿ ಮಾಡಿ ದಿಬ್ಬಣ ಮುಖ್ಯಸ್ಥರಿಗೆ ವಹಿಸಿ ಕೊಡುವೆಂತವೇ...

(ವಹಿಸಿ ಕೊಡುವೆಂತವೇ...)

**ಹೊಸೋಕ್ಲ್ ಮೋಕ್ಷಿತ್ ತಿಮ್ಮಯ್ಯ**
ಬಲ್ಲಮೊವಟಿ ಗ್ರಾಮ, ನಾಪೊಕ್ಲ್ ಅಂಚೆ, ಮಡಿಕೇರಿ
ಮೊಬೈಲ್ : 7338430749

# ಪಂಡ್‌ನ ಕಾಲದ ಅಗೆ-ನಾಟಿ(ಗದ್ದೆ) ಕೆಲ್‌ಸ

• ಕಡ್ಯದ ಪಾರ್ವತಿ ಕೃಷ್ಣಪ್ಪ

ಈ ನಮ್ಮ ದೊಡ್ಡ ದೇಶ ಭಾರತದ, ಕರ್ನಾಟಕ ರಾಜ್ಯದ, ಕೊಡಗ್ ನಾಡ್‌ನ ಶ್ರೀ ಕಾವೇರಮ್ಮನ ಮಣ್ಣ್‌ಲೀ, ಹತ್ ಕುಟುಂಬ, ಹದ್‌ನೆಂಟ್ ಗೋತ್ರದ, ಜನಾಂಗ ಬಾಂದವು ಪಂಡ್‌ನ ಕಾಲಂದೇ ಬೇಸಾಯನ ನಂಬಿಕಂಡ್ ಬೇಸಾಯನ ಮುಖ್ಯ ಕೆಲ್‌ಸತ್ತ್ಳೀಳಿ ಕಂಡ್ ಬಂದವು.



ಹಂಗೇನೆ ಈ ನಮ್ಮ ಊರ್‌ಲಿ ಸಹ ಎಲ್ಲವು ಒಟ್ಟಾಗಿ ಕೂಡಿಕಂಡ್ ಆಳಿಗೆ ಆಳ್ (ಮೈಯಾಳ್) ಹೊಕಂಡ್ ನಾಟಿ ಕೆಲ್‌ಸ, ಬೆಳೆ ಕೆಲ್‌ಸನ್ ಮಾಡ್‌ತವಳೊ. ಮುಂಗಾರ್ ಮಳೆ ಹೊಯಿತ್, ಭೂಮೆಲ್ಲ ತಂಪಾತ್, ಗದ್ದೆಗಳಿಗೆ ಸಗಣಿ ಗೊಬ್ಬರಗ ಚೆಲ್ಲಾತ್.

ಭೂಮಿ ಹೂಡಿಕೆ ಬೀಸು ಹಬ್ಬ ದಿನ ಎತ್ ಕಟ್ಬೋಕು. ಆಗ ಬೇಸಿಗೆ ಹಬ್ಬ, ಮದ್‌ವೆ, ಜಂಬರಂತ್ತೇಳಿ ಎತ್ ಕಟ್ಟಿಕೆ ಪುರುಸೊತ್ತೇ ಇತ್ಲೆ. ಇನ್ ಯಾಗ ವಳ್ಳ ದಿನ ಉಟ್ಟು? ಎತ್ ಕಟ್ಟಿಕೇತೇಳಿ ಗ್ಯಾನ ಮಾಡ್‌ದೋ ಬಾಬಣ್ಣ; ನಮ್ಮ ಊರ್‌ಲಿ ಸೋಂಪತ್ತ್ಳುವ್ ಪಂಚಾಂಗ ನೋಡ್‌ವೆ. ಅವರ ಹತ್ರಹೋಗಿ ಕೇಳ್ಸ್‌ಕಂಡ್ ಬನ್ನೆಂತ್ತ್ಳೆ ಹೊರ್‌ಟತ್ ಬಾಬಣ್ಣ

ಸೋಂಪಣ್ಣ – ಓ ಬಂದರಿಯಾ ಬಾಬಣ್ಣ, ಏನ್ ಬಾರಿ ದಿನ ಕಳ್ದ್ ಮನೆಕಡೆ ಬಂದೋಳ್‌ರಿ. ಬನ್ನಿ ಕೂರಿ, ಏಯ್ ಅಕ್ಕಿ ವಳಗೆಂದ ಒಂದು ಗ್ಲಾಸ್ ಕಾಫಿ ತಕಬಾನೆಂತ ಹೆಣ್ಣ್‌ಗೆ ಹೇಳ್‌ತ್ ಸೋಂಪಣ್ಣ. ಏ ನಂಗೆ ಕಾಫಿ–ಗಿಫಿ ಬ್ಯಾಡಣ್ಣ ನಾನ್ ಬೀಸುಲಿ ಹಬ್ಬ ಮದ್ವೆಂತ ಗದ್ದೆಗೆ ಏತ್ ಕಟ್ಟಿತ್‌ತ್ಲೆ. ಯಾಗ ವಳ್ಳ ದಿನ ಉಟ್ಟುತ ಒಮ್ಮೆ ಪಂಚಾಂಗ ನೋಡಿ ಹೇಳಣ್ಣಂತ ಹೇಳ್‌ತ್ ಸೋಂಪಣ್ಣ.

ಓ ಅಷ್ಟೇನಾ! ನಾನೇನಾರ್ ಕೊಡಿಕೆ, ತಕಂಬಕೆ ಬಂದಾಂತ ಗ್ಯಾನ ಮಾಡ್ದ್. ಅದಿಕ್ಕೇನಾಕು ಬುಡು ನೋಡಿ ಹೇಳ್ ನೇಂತ್ತ್ಳ್‌ತ್ ಬಾಬಣ್ಣ.

ಏಯ್ ಅಕ್ಕಿ ವಳಗೆಂದ ಕೊಂಬರೆ ಗ್ವೊಡೆ ಪೆಟ್ಟೀಗೇಲಿ ನನ್ನ ಪಂಚಾಂಗ ಪುಸ್ತಕ ಉಟ್ಟು ಅದರ್‌ನು, ಹಂಗೆ ಹಾಸಿಗೆ ತಲೆಗಡಿಲಿ ನನ್ನ ಕನ್ನಡ್‌ಕವುಟ್ಟು ಎರ್‌ಡರ್‌ನ್ ಒಮ್ಮೆ ತಂದ್ ಕೊಡುಂತ್ತ್ಳಿ ಹೆಣ್ಣಿಗೆ ಹೇಳ್‌ತ್ ಬಾಬಣ್ಣ.

ಹೆಣ್ಣ್ ವಳಗೆಂದ ಪಂಚಾಂಗ ಪುಸ್ತಕನು, ಕನ್ನಡ್ಕನು ತಂದ್ ಗಂಡನ ಕೈಗೆ ಕೊಟ್ಟತ್ತ್ ಬಾಬಣ್ಣ ಪಂಚಾಂಗ ಪುಸ್ತಕನ ತೆಗ್‌ತ್ ಮಂಗ್‌ಳ್ವಾರ ನೋಡ್ ಅಂದ್ ಹಂದಿ ಕರ್ಣ, ಬುದ್ವಾರ ಇಂದ್, ಹುಲಿಕರ್ಣ, ಸರಿ ಇಲ್ಲೆ – ಹಂ ನೋಡ್ರ್ ಬಾಬಣ್ಣ ಬೆಸ್‌ತ್ವಾರ ದಿನ ಆನೆಕರ್ಣ ಅಂದ್ ಬೆಳಿಗ್ಗೆ ಏತ್‌ಕಟ್ಟಿಕೆ ಬಾರಿ ಲಾಯಿಕ ಉಟ್ಟುತೇಳ್‌ತ್.

ಬಾಬಣ್ಣ ಬೇಸ್‌ತ್ವಾರ ದಿನ ಬೆಳಗ್ಗೆ ಬ್ಯಾಗ ಎದ್ದ್ ಮುಖ ತೊಳ್ದ್ ಕರಿಕಾಫಿ ಕುಡ್‌ದ್, ನೆಗ್‌ಲ್, ನೊಗ, ಜೆಮಿಹಗ್ಗ, ಚೂಡಿ ಕಟ್ಟ್, ಒಂದು ನೆಕ್ಕಿ ಕೊಲ್, ಸ್ವಲ್ಪ ಅಕ್ಕಿನ ತಕ್ಕಂಡ್ ಹಟ್ಟಿಗೆ ಹೋಗಿ ಕರಿಯ ಮತ್ತೆ ಬೋಜಣ್ಣ ಎತ್‌ನ ಹೊಡ್‌ಕಂಡ್ ಗದ್ದೆಗೆ ಹೋದ್ರೊ.

ಕರಿಯ ಎತ್ತ್‌ನ ಎಡಗೋಲಿಗೂ, ಬೋಜಣ್ಣ ಎತ್ತ್‌ನ ಬಲಗೋಲಿಗೊ

ನಿಲ್ಸಿಸಿ ಎರಡ್ ಎತ್‌ಗಳ ಹೆಗ್‌ಲಿಗೆ ನೊಗ ಮಡ್‌ಗಿ, ಜೆಮಿಹಗ್ಗಲಿ ಕಟ್ಟಿ, ನೊಗಕ್ಕೆ ನೇಗ್‌ಲ್‌ನ ತೊಡೆಕಟ್ ಹಗ್ಗಲಿ ಕಟ್ಟಿ, ಕೈಲಿದ್ದ ಅಕ್ಕಿನ ಸೂರ್ಯಂಗೆ ಸ್ವಲ್ಪ, ಎತ್‌ಗಳಿಗೆ ಸ್ವಲ್ಪ, ನೇಗ್‌ಲ್ ನೊಗಕ್ಕೆ ಸ್ವಲ್ಪ, ಭೂಮಿತಾಯಿಗೆ ಹಾಕಿ ಸ್ವಾಮಿ ಎತ್‌ಗಳಿಗೆ, ನೇಗ್‌ಲ್ ನೊಗಕ್ಕೆ, ಮನ್‌ಸಂಗೆ ಹೂಡಿ ನಾಟಿ ನೆಡುವಲ್ಲಿವರೆಗೆ ಏನೊಂದು ತೊಂದರೆ ಆಗದಿರ್‌ಲಿತೇಳಿ ಮನ್‌ಸ್‌ಲಿ, ಭೂಮಿತಾಯಿನ, ಕಾವೇರಮ್ಮನ, ಇಗ್‌ತ್ತಪ್ಪನ, ಕುಲಗುರುನ, ಊರ್ ದೇವ್‌ರ್‌ನ ಗ್ಯಾನ ಮಾಡಿಕಂಡ್ ಬಲಗೈಲಿ ನೇಗ್‌ಲ್ ಹಿಡ್‌ಕಂಡ್, ಎಡಗೈಲಿ ನೆಕ್ಕಿ ಕೋಲ್ ಹಿಡ್‌ಕಂಡ್ ಹೂಡಿಕೆ ಸುರ್‌ಮಾಡ್‌ದೋ ಬಾಬಣ್ಣ.

ಹರ ಬೋಜೊ

ಹೀ ಬೋಜೊ

ಎಳಿಯಪ್ಪ ಕರಿಯಾ

ತಿರ್‌ಗಿ ಬಾರಣ್ಣ ಬೋಜೋಂತ ಜೋರಾಗಿ ಹಾಡ್ ಹೇಳಿಕಂಡ್ ಹೂಡ್‌ವೆ. ಹಾಡ್ ಕೇಳಿಕಂಡ್ ಹೆಜ್ಜೆ ಹಾಕುವೆ ಎತ್‌ಗೆ. ಹೂಡಿ ಅತ್, ಗದ್ದೆಗೆ ಬೀಜನ ಒಂದು ದಿನ ನೀರಿಗಾಕಿ ಎರಡ್ನೆ ದಿನ ಭತ್ತನ ಚೀಲನ ಎತ್ತಿ ಮಡ್‌ಗಿ, ಮೂರ್‍ನೆ ದಿನ ಬಿತ್‌ನ ನೀರ್ ಕಟ್ಟಿದ ಗದ್ದೆಗೆ ಹಾಕಿನೂ ಆತ್. ಇನ್ನ್ ನಾಟಿಗಿರುವ ಗದ್ದೆನ ತಯಾರ್ ಮಾಡೋಕು, ಹೊಡಿಗೆ 2 ಸಾಲ್ ಹೂಡ್‌ದಂಗೆ ಸಗ್‌ಣಿ ಹೊಡಿ ಗೊಬ್ಬರನ ಗದ್ದೆತುಂಬ ಚೆಲ್ಲೋಕು, ಮತ್ತೆ ಗದ್ದೆಗಳಿಗೆ ನೀರ್ ಕಟ್ಟಿ 3ನೇ ಸಾಲ್ ಹೂಡೋಕು. ಮತ್ತೆ ಪುಣಿ ಹರಿಯೋಕು ಮತ್ತೆ ನಾಲ್ಕ್‌ನೇ ಸಾಲ್ ಹೂಡೋಕು ಮತ್ತೆ ಗದ್ದೆ ಪುಣಿಗಳಿಗೆ ಮಣ್ಣ್ ಮಡ್‌ಗೋಕು ಮತ್ತೆ 5ನೇ ಸಾಲ್ ಹೂಡಿ, ಬೆಳ್ಳಂದಿ ತಾಯಿಮರ ಎತ್ತ್‌ಗಳಿಗೆ ಕಟ್ಟಿ ಮರ ಹೊಡ್ದ್ ಮೆಕ್ಕ್‌ರಿ ಮಣ್ಣ್‌ನ ಕಿಕ್‌ಗೆ ತಂದು ಗದ್ದೆನ ಒಂದೇ ಸಮ ಊಟದ ಬಿಲ್ಲ್‌ನಂಗೆ ಮಾಡೋಕು. ಈಗ ನೋಡಿ ನಾಟಿ ನೆಡಿಕೆ ಗದ್ದೆ ತಯಾರಾತ್. ನಾಟಿ ನೆಡಿಕೆ ಒಂದು ವಾರಕ್ಕೆ ಮುಂದೆ ಮನೆ ಯಜಮನ್‌ತೀ ಮಂಗಳ್ವಾರ ಇಲ್ಲೆ ಶುಕ್ರಾರ ದಿನ ನೋಡಿ ಬೆಳಿಗ್ಗೆ ಬ್ಯಾಗ ಎದ್ದ್, ಮುಖ ತೊಳ್ದ್, ದೇವ್ರ ಬೊಟ್ಟಾಕಿ, ತಲೆ ಬಾಚಿ, ತಲೆಗೆ ಚೆಕ್ ವಸ್ತ್ರ ಕಟ್ಟಿ, 5 ಎಲೆ 1 ಅಡಿಕೆ, 5 ಸರ್ಲಿಲ್ ಸೊಪ್ಪು, 5 ಬಗೆನ ಹೂ, ಸಲ್‌ಪ ಅಕ್ಕಿನ ತಕಂಡ್ ತಲೆ ಮ್ಯಾಲೆ ಗೊರ್‌ಗ್‌ನ ಹಾಕಂಡ್ ಅಗೆ ಗದ್ದೆಗೆ ಹೋದೆ. ಅಗೆ ಗದ್ದೆನ ನಡುವಡಿಲಿ ಪುಣಿ ಕರೆಲಿ ನಿತ್, ಎಲೆ ಅಡಿಕೆನ ಮಡ್‌ಗಿ ಅದಿಕ್ಕೆ ಹೂನ ಮಡ್‌ಗಿ, 5 ಸರ್‌ಲಿ ಸೊಪ್ಪುನ ಮಡ್‌ಗಿ, ಅದ್‌ಕೆ ನಾಕ್, ನಾಕ್ ಅಕ್ಕಿ ಕಾಳ್‌ನ ಹಾಕಿ, ಸೂರ್ಯಂಗೆ ಮತ್ತೆ ಭೂಮಿತಾಯಿಗೆ ಅಕ್ಕಿಹಾಕಿ ಶರಣ್ ತಕ್ಕಂಡ್ ಕೈ ಮುಕ್ಕಂಡ್ ತಾಯಿ

ಲಕ್ಷ್ಮೀ, ಅಗೆ ತುಂಡಾಗದೆ, ಹಾಳಾಗದೆ, ಪರಿಗೆಂಡೆ ಆಗದೆ, ನಮ್ಮ ಗದ್ದೆಗೆಲ್ಲ ನೆಟ್ ಹೆಚ್ಚಾಗಿ, ಊರಿಗೆಲ್ಲ ಆಗುವಂಗೆ ಅಕ್ಷಯ ಆಗಲಿಂತ ದೇವುರ್‌ಗಳ್ನ ಮನ್‌ಸ್‌ಲಿ ಗ್ಯಾನ ಮಾಡಿಕಂಡ್ ಕುಂಞ ಕುಂಞ 5ಸುಡಿ ಅಗೆ ತೆಗ್‌ದರೆ ಅಲ್ಲಿಗೆ ಅಗೆ ಮೂರ್ಹತ ಮುಗ್‌ತ್.

ಹಂಗೆನೆ ಸ್ವಲ್ಪ ದಿನಲಿ ಅಕ್ಕ–ಪಕ್ಕ, ನೆರೆ–ಕೆರೆ ವೆಲ್ಲ ಕೂಡಿಕಂಡ್ ಬಾಬಣ್ಣನ ಗದ್ದೆಲಿ ದೊಡ್ಡ ಅಗೆ ತೆಗಿಯಕ್ಕೆ ಅಕ್ಕಂದರೆಲ್ಲ ಸೇರಿಕಂಡೊಳೋ ಅಲ್ಲಿ ಹಾಡ್, ಸುದ್ದಿ, ಸೋಬಾನೆ ಒಬ್ಬೊಬ್ಬ ಒಂದೊಂದು ಹೇಳ್‌ವೆ. ಅದರ್‌ಲಿ ಮದುವ್ಯಾದ ಹೊಸ್‌ಬಿ ಗೊಡೆಗ ಇದ್ದರಂತು, ಅವ್‌ಕೆ ತಮಾಷೆ ಮಾಡಿ ಕಂಡ್ ಅವರ್‍ನ ಹಾಡ್ ಹೇಳ್‌ಸದೆ ಬುಡಿಕ್ಕಿಲ್ಲೆ. ಅದ್‌ಕ್ಕೆ ನಾನ್ ಹೊಸ್‌ಬಿ ಅಗಿರ್‌ಕನ ಒಬ್ಬೊರ ಅಗೆ ಗದ್ದೆಗೆ ಹೋಕನ ಒಂದೊಂದು ಹೊಸ ಹಾಡ್‌ಗಳ್ನ ಹೇಳ್‌ತ್ತಿದ್ದೆ. ಹಾಡ್ ಹೇಳದೆ ಹೋದರೆ ಎಲ್ಲವು ಸೇರಿಕಂಡ್ ಜರ್‌ದವೆಲ್ಲ. ಅದರ್‌ಲಿ ಅಗೆ ತೆಗೆವ ಈ ಹಾಡ್ ಬಾರಿಲಾಯಿಕ

ಏಳ್ ಏಳಪ್ಪ ಎಳೆಸಪ್ಪ ಗದ್ದೇನ
ಗದ್ದೆನ ಏಳಸಿಕೆ ನಂಗೆ ಏಳ ಮಗಕ್ಕವಳೋ
ಎಳ್ ಜನಕೆ 7 ಸೀರೆ ಅಕು
ಎಳ್ ಜನಕೆ 7 ರವಿಕೆ ಆಕು
ಅಂದರೆ ಮಾತ್ರ ಆಗೆ ಗದ್ದೆನ ಏಳಸಿನೆ...

ದೊಡ್ಡ ಅಗೆ ತೆಗ್‌ದೇನೋ ಅತ್, ಕೋಳಿ ಗೈಪು, ಕಡ್‌ಂಬಿಟ್ ಸೊಂತೆಕಾಯಿ ಗೈಪು ಅನ್ನ ಉಂಡು ಆತ್.

ಇನ್ ಕಂಬಳ ನಾಟಿಲಿ ಕೊಡಿನಾಟಿ, ಸಾಲ್‌ನಾಟಿ ಅಲ್ಲದೆ ಓಟ್ನಾಟಿ ಸನ ಉಟ್ಟು – 10ರಂದ್ 11 ಗಂಟೆಗೆ ಸರಿಯಾಗಿ ಅವರವರ ಗದ್ದೆಲಿ ಹೂಡಿ ಎತ್ತ್ ಬುಟ್ ಬಾಬಣ್ಣನ ನಾಟಿ ಗದ್ದೆಗೆ ಹೇಳ್‌ದವೆಲ್ಲ ನಾಟಿಗೆ ಬಂದವೇ. ಕೊಡಿ ನಾಟಿ ಮಡ್‌ಗವುಕ್ಕೆ ಅದೇ ಕೆಲ್ಸ, ಉಳ್‌ದವು ಸಾಲ್ನಟಿ ಮಾಡ್‌ತ್ತಿದ್ದವೆ. ಅಲ್ಲಿ ಕಿಟ್ಟುಂತ ಹೇಳಂವ ನಾಟಿ ನಡ್‌ತ್ತಿದ್ದದೆ, ಅಂವ ಹೊಯ್ಯ ಹಾಕಿಕೆ ಸುರುಮಾಡ್‌ದೇ

ಕಾವೇರಮ್ಮನ ಮಣ್ಣ್‌ಲಿ ಓ ಹೊಯ್ಯ... ಓ ಹೋ ಹೋಯ್ಯ
ಇಗ್‌ತ್ತಪ್ಪನ ನೆಲೇಲಿ ಓ ಹೊಯ್ಯ... ಓ ಹೋ ಹೋಯ್ಯ
ಗದ್ದೇನ ಹೂಡಿ ಓ ಹೊಯ್ಯ... ಓ ಹೋ ಹೋಯ್ಯ
ಚಿನ್ನದಂಥ ಬಿತ್‌ನ ಬಿತ್ತಿ ಓ ಹೊಯ್ಯ... ಓ ಹೋ ಹೋಯ್ಯ
ರನ್ನದಂತ ಅಗೆನ ತೆಗ್‌ದ್ ಓ ಹೊಯ್ಯ... ಓ ಹೋ ಹೋಯ್ಯ

ಕೊಡಿ ನಾಟಿ ನೆಡ್‌ತ್ತೋಳೊ ಓ ಹೊಯ್ಯ... ಓ ಹೋ ಹೋಯ್ಯ
ಸಾಲ್ ನಾಟಿ ನೆಡ್‌ತ್ತೋಳೊ ಓ ಹೊಯ್ಯ... ಓ ಹೋ ಹೋಯ್ಯ
ಕಂಬಳ ನಾಟಿಗೆ ಎಂತೆಲ್ಲಿ ಗಕ್ಕಾಳ ಓ ಹೊಯ್ಯ... ಓ ಹೋ ಹೋಯ್ಯ
ನಾಡ್ ಕೋಳಿ ಗೈಪು ಓ ಹೊಯ್ಯ... ಓ ಹೋ ಹೋಯ್ಯ
ಕಡ್‌ಂಬಿಟ್ಟ್ ಕಳ್ ಓ ಹೊಯ್ಯ... ಓ ಹೋ ಹೋಯ್ಯ.

ಹಿಂಗೆ ಒಬ್ಬ ಹೇಳ್‌ದಂಗೆ ಬಾಕಿ ಇದ್ದವು ದನಿ ಕುಡ್‌ಸುವೆ

ನಮ್ಮ ಊರ್‌ಲಿ ಆಟಿ ತಿಂಗಳ್ಳ್ ನಾಟಿ ಕೆಲಸ ಮಾಡ್‌ಕನ ಎಲ್ಲರ ಮನೇಲಿ ನಾಡ್‌ಕೋಳಿ ಗೈಪು, ಆಟಿ ಪಾಯಸ, ಪತ್ರೋಡೆ ಇದ್ದದೆ. ದೊಡ್ಡ ಗದ್ದೆ ನಾಟಿ ನೆಡವು ಒಂದು ಮೂಲೇಲಿ ಕೈ ಕುಂಞ ಅಗೆನ ನೆಡದೆ ಅಲ್ಲೇ ಮಡ್‌ಗಿವೆ. ಯಾಕೆಂತೇಳ್‌ರೆ ಅದು ಗಣೋದಿ ಮಡ್‌ಗಿಕೆ.

ಈಗ ಓಟ್ನಾಟಿ ಸುರಾದೆ. ಗಂಡ್ ಮಕ್ಕ ಓಡಿಕೆ ಸಾಲಾಗಿ ನಿತ್ತೋಳೋ ಮಕ್ಕ ಕೈ ಬೀಸಿದಂಗೆ (ಸಿಗ್ನಲ್ ಕೊಟ್ಟಂಗೆ) ಓಡಿಕೆ ಸುರುಮಾಡ್ವೆ, ಒಬ್ಬೊಬ್ಬ ಗದ್ದೆವಳಗೆ ಬಿದ್‌ಕಂಡ್, ಕೆಸ್‌ರ್ ಮೆತ್ತಿಕಂಡ್ ಓಡ್ವೆ, ಪುಣಿಲಿ ನಿತ್ತವು ಮಕ್ಕಳಿಗೆ ಓಡ್‌ರೋ.. ಓಡೊರೋ... ಹಾರ್‌ರೋ.... ಹಾರ್‌ರೋ ಅಂತ ಹುರಿದುಂಬುಸುವೆ. ಓಟ್‌ಲಿ 1ನೇ ಬಂದವ್‌ಕೆ ದುಡ್ಡು, 2ನೇ ಬಂದವ್‌ಕೆ ಬಾಳೆಗೊನೆ, 3ನೇ ಬಂದವ್‌ಕೆ ತೆಂಗಿನಕಾಯಿ, 4ನೇ ಬಂದವ್‌ಕೆ ತಂಬೂಲ ಕೊಟ್ಟ್ ಗೌರವಿಸುವೆ.

ಈಗ ಗಣೋಧಿಗೆ ಮಡ್‌ಗುವ ಸರ್‌ದಿ; ಬಾಬಣ್ಣ ನಾಟಿ ಕೂಡಿಕೆ ಮುಂದೇನೆ ಮನೆಗೆ ಹೋಗಿ ಗಣೋಧಿಗೆ ಬೇಕಾದ 1 ಕೂಂಬೆ ಮೂರಿಯದ ಬಾಳೆಗೊನೆ, 1 ತೆಂಗಿನಕಾಯಿ, 1 ಅಚ್ಚಿ ಬೆಲ್ಲ, 1 ಮಾನ ವಣಿಗಿಸಿ ಹೊರ್‌ದ ಹಲಸ್‌ನ ಬಿತ್ತ್, 1 ಪಾವು ಹೊರ್‌ದ ಕುಚ್‌ಲಕ್ಕಿ, 5 ಎಲೆ, 1 ಅಡಿಕೆ, 1 ಹಣ ದುಡ್ಡು, 5 ಸೂರ್‌ಲಿ ಸೊಪ್ಪು, 2 ಕೊಡಿ ಬಾಳೆಲೆ, ಚೊಂಬುಲಿ ತುಂಬ ಬಿಸಿ ಬಿಸಿ ಕಾಫಿ.

ನೆರೆಮನೆ ವಾಸಣ್ಣ ಬಂದ್ ಕೈ, ಕಾಲ್, ಮುಖ ತೊಳ್‌ದ್ ಎರ್‌ಡ್ ಕೊಡಿ ಬಾಳೆಲೆ ಮ್ಯಾಲೆ 5ಎಲೆ ಅಡಿಕೆಯನ ಮಡ್‌ಗಿ, ಅದಿಕ್ಕೊಂದು ಹಣ ಮಡ್‌ಗಿ, ಪಕ್ಕನೇ ಬಾಳೆಗೊನೆ ಮಡ್‌ಗಿ, ಬೆಲ್ಲನ ಮಡ್‌ಗಿ, 5 ಸರ್‌ಲ್ ಸೊಪ್ಪನ ಸಾಲಾಗಿ ಮಡ್‌ಗಿ ಅದ್‌ಕ್ಕೆಲ್ಲ ನಾಕ್, ನಾಕ್ ಹಲಸಿನ ಬಿತ್, ಹೊಕಾದ ಅಕ್ಕಿನ ಹಾಕಿ, ಕಾಯಿ ವಡ್ಡ್ ಒಂದೊಂದು ಹೋಳು ಕಾಯಿಚುರ್‌ನ ಸರ್‌ಲೆಲೆ ಮ್ಯಲೆ ಮಡ್‌ಗಿ, ಈಗ ಬುಟ್ಟ ನಾಟಿನ ನೆಟ್ ಕುಡ್ಸ್‌ಕು. ಆಗ ಅಲ್ಲಿ ಹೇಳಿಕಂಬ ಒಕ್ಕಣೆಂತೇಳ್‌ರೆ

ನಾವು ಕೈ ಹಿಡ್‌ದ ನೆಟ್ಟ ನಾಟಿ
ಕಾವೇರಮ್ಮನ ಇಷ್ಟದಂಗೆ

ಇಗ್‌ತ್ತಪ್ಪನ ಕಂದ್‌ನಂಗೆ
ಜಿಡ್‌ರ್ ಹಿಂಡ್‌ಲ್‌ನಂಗೆ ನೀಡಿಕೊಡಿ
ಏಳ್ ಕಡಿಕೆ ಬತ್ತಾಗಿ
ಸಾಲ್ ಮುಂಡ ಹುಲ್ಲಾಗಿ
ಹುಲಿ ನಾಯಿಗೆ ನಂಜಾಗಿ
ಧನ ಕರ್‌ಗೆ ಹುಲ್ಲಾಗಿ
ನಮಿಗೆ ದೇವ್‌ರಿಗೆ ಪಾಲಾಗಿ
ಏರಿಗೂ ಬಾರಿಗೂ ಬಿದ್ ಬೆಳ್‌ದ್
ವರ್ಷಕೆ ಮುಂದೆ ಕದ್‌ರೋಗಿ
ಬೆಳ್ದಬಾ, ಅಡಿ ಅಡಿ ಬಾ ನಾಟಿಂತ ಹೇಳುವೆ.

ನಾಟಿಗೆ ಯಾರ್ಯಾರ್ ಹೊರಗಿನವು ಬಂದಿದ್ದರೆ ಅವರ ಕೈಲಿ। ಕರಿಗುತ್ತಿನ ನಾಟಿ ಗದ್ದೆ ನಡುಲಿ ನೆಡ್‌ಸುವೆ (ಅದ್ ಗುತ್ತಿನಂಗೆ ಕಪ್ಪಾಗಿ ನಾಟಿ ಬರಲಿತ) ಮತ್ತೆ ಅಲ್ಲಿ ಇದ್ದ ನಾಟಿಯವುಕೆ ಗೊನೆಂದ 5ಹಣ್ಣಿನ ಗದ್ದೇಲಿ ಮಡ್‌ಗಿ ಉಳದ ಬಾಳೆಹಣ್ಣ್, ಹಲ್‌ಸ್ನ ಬಿತ್, ಅಕ್ಕಿ, ಬೆಲ್ಲನ್ನೆಲ್ಲ ಸ್ವಲ್ಪ ಸ್ವಲ್ಪ ಹಂಚಿ, ಕುಡಿಯಕೆ ಬಿಸಿ, ಬಿಸಿ, ಕಾಫಿ ಕೊಟ್ಟವೆ. ಎಲ್ಲವೂ ಸೇರಿಕಂಡೆ ಒಂದೇ ದನಿಲಿ ದೊ.. ದೋ..ದೋ.. ಹೊಯಿತ ಅಂತ ಮೂರು ಸಲ ಜೋರಾಗಿ ಕೊಗ್‌ವೆ. ಎಲ್ಲವೂ ಅವರವರ ಮನೆಗಳಿಗೆ ತಿರುಗುವೆ. ಇಲ್ಲಿಗೆ ನಾಟಿ ಕಲ್‌ಸ  ಮುಗ್‌ತ್.

**ಶಬ್ದದ ಅರ್ಥ**

ಚೂಡ್‌ಕಟ್ –  ನೇಗ್‌ಲ್ ನೊಗ ಕಟ್ಟುವ ಹಗ್ಗ; ಜೆಮಿ – ಎತ್ತುನ ನೊಗ ಕಟ್ಟುವ ಹಗ್ಗ; ಪುಣಿ – ಏರಿ; ಮೆಪುಣಿ – ಮೆಲ್ಬ್‌ಗ; ಕಿಪುಣಿ – ಕೆಳಭಾಗ ; ಸುಡಿ – ಕಂತೆ; ಗಣೋದಿ – ಗಣಪತಿ; ಕುಂಬೆ – ನೀರು ಹೋಗುವ ದಾರಿ; ಹೋಳು – ತುಂಡು ; ಬೆಳ್ಳಂಗಿ – ಉಯ್ಯಪಾರ್ (ನೇಗ್‌ಲ್ ದ್); ತಾಯಿಮರ – ತದೆ – ಮಣ್ಣ್‌ನ ಸಮ ಮಾಡ್‌ದು.

---

**ಕಡ್ಯದ ಪಾರ್ವತಿ ಕೃಷ್ಣಪ್ಪ**
ಅವಂದೂರು

# ಕಾರ್ತಿಂಗಳ ಹರಕೆ

● ಸಿಂಚನ ಕೆ.ಯನ್.

ಪಗ್ಗು, ಬೇಸಗೆ, ಕಾರ್ತಿಂಗ, ಆಟಿ, ಸೋಣ, ನಿರ್ನಾಲ್, ಬೆನ್ತಿಂಗ, ಜಾರ್ಥೆ, ಪೆರಾರ್ಥೆ, ಪೊನ್ನಿ(ಪುಯಿಂತೆಲ್), ಮಾಯಿ ಹಾಗೂ ಸುಗ್ಗಿ ಇದಿಸ್ಟ್ ಹನ್ನೆರಡ್ತಿಂಗಗ ಇದ್ದ್ ಅದರ್ಲಿ ಕಾರ್ತಿಂಗದ ಗೌಜಿನ ಹೇಳಿಕೆ ಇಚ್ಚಿಸಿನೆ.

ನಮ್ಮ ತಾತನವರ ಕಾಲಲಿ ಬೇಸಾಯ ಮಾಡಿಕಂಡ್ ಇದ್ದ ಸಮಯ ಆಗಿತ್ತ್. ಆ ಸಮಯಲಿ ಬಿಸ್‌ಲ್, ಮಳೆತೇಳದೆ ಗದ್ದೆಲೇ ಬೇಸಾಯ ಮಾಡಿ ದುಡ್ದವ್ಕೆ ಈ ಕಾರ್ತಿಂಗ ಒಂದು ರೀತಿಲಿ ಗೌಜಿ ಇದ್ದಾಂಗೆ.

ನಾವು ಬೆಳ್ಸಿದ ಬೆಳೆಗೆ ಪೊರ್ಲುಲಿ ಬೆಳೆಲಿತಾ ಗುರುಹಿರಿಯವ್ಕೆ ಒಂದು ಕೋಳಿಕೊಂದು ಗೈಪು ಮಾಡಿ ಮತ್ತೆ ಹಲಸಿನ ಹಣ್ಣ್‌ನ ಮೂಡೆಹಿಟ್ಟ್ ಸಮ್ಮನದ ಒಟ್ಟಿಗೆ ಪಾಷಣಮೂರ್ತಿ ದೆವ್ವಕೆ ಎಡೆ ಇಕ್ಕಿ ಸಮ್ಮನ ಮಾಡ್ದು ಈ ತಿಂಗಳ್ಳಿ ಆಗಿದ್ದದೆ.

ಮನೆ ಹೆಣ್‌ಮಕ್ಕ ಬೊಳ್ಪಿಗೆ ಬೇಗ ಎದ್ದ್, ಮನೆ ಎಲ್ಲ ಗುಡ್ಸಿ, ಒರ್ಸಿ, ಅಕ್ಕಿನ ಪದುನಿಕೆ(ನೆನೆ) ಹಾಕಿ, ಹಲ್ಸುನ ಹಣ್‌ನ ತಂದ್ ಅದರ ತೊಳೆ ಬೇರೆ ಹಲಸಿನಕ್ಕಿ ಬೇರೆ ಮಾಡುವೆ ಮತ್ತೆ. ಸಾಗ್ವಾನಿ ಇಲ್ಲ ಕೂಗ್‌ಲೆ ಸೊಪ್ಪುನ (ಎಲೆ) ಕೊಯ್ಕಂಡ್ ಬಂದ್ ಅದರ ತಂದ ಮೇಲೆ ಬಟ್ಟೆಲಿ ಲಾಯಿಕ್ ಉಜ್ಜಿ ಪೂರ ತೆಗ್ದ್ ಒಂದು ಕರೆಲಿ ಇಸುದು. ಹಿಂಬೊತ್ತು ಆಕನ ಪದುನ್ನಿದ (ನೆನೆಹಾಕಿದ) ಅಕ್ಕಿನ ಮತ್ತೆ ಬುಡ್ಸಿಸಿದ ಹಲ್‌ಸ್ನ ಹಣ್ಣ್ ಹಾಕಿ ಕಡ್ದ್ ತೆಗ್ದ್ ಪೂಜಿ ಇಸಿದ ಸೊಪ್ಪುನ ಮೇಲೆ ಈ ಬಂದನ ಪೂಜಿಸಿದ್ ಎಲೆನಾ ಮಡ್ಚಿ ಇಡ್ಲಿ ಮಡಿಕೆಲಿ ಸೆಕೆ ಬರ್ಸಿಕೆ ಇಸುವೆ.

ಇದರೊಟ್ಟಿಗೆ ಮನೆ ಯಾಜಮಾನ ಮೂಡಕ್ಕೆ ನಿಂತ್ ಹುಂಜ ಕೋಳಿನ ತಕಂಡ್ ಅದರ ಕಾಲ್ತೊಳ್ಸಿವೆ, ಅಕ್ಕಿ ತಿನ್ಸಿ, ನೀರ್ ಕುಡ್ಸಿ ಮನೆಲಿ ಇದ್ದವರೊಟ್ಟಿಗೆ ಹೇಳಿಕಂಡ್ ಕೊಂದವೆ. ಮತ್ತೆ ಮನೆ ಯಜಮಾನ ಮೀದ್ ನೀರ್ನೊಟ್ಟಿಗೆ ಅಕ್ಕಿನ ಇಸಿ, ಮತ್ತೆ ಮೊಟ್ಟೆ ಇಸದ ಹೇಂಟೆ ಕೋಳಿನ ತಕಂಡ್ ಬಂದ್ ಅದರ ಕಾಲ್ತೊಳ್ದ್, ಅಕ್ಕಿ ತಿನ್ಸ್, ನೀರ್ ಕುಡ್ಸಿ ಕೊಂದವೆ.

ಈ ಪಾಷಣಮೂರ್ತಿ ದೆವ್ವಕ್ಕೆ ಕೋಳಿ ಕೊಲ್ಲಿಕನ ಹೇಂಟೆನೆ ಆಕು, ಮೊಟ್ಟೆ ಇಸಿಕೆ ಬೋತ್ತು, ಮೊಟ್ಟೆ ಇಸಿರೆ ಅದ್ ಐದ್ ಅಥವಾ ಏಳ್ ಮೊಟ್ಟೆಗಿಂತ ಜಾಸ್ತಿ ಆಕೆ ಬೊತ್ತು. ಗೈಪು ಮಾಡಿಕನ ಈ ಮೊಟ್ಟೆನನು ಗೈಪಿಗೆ ಹಾಕೊಕು.

ಮತ್ತೆ ಮನೆಲಿ ಇದ್ದವೂ ಎಲ್ಲ ಮೀದ್ ಬೇಸಾಯ ಮಾಡಿಕೆ ಯಾರೆಲ್ಲ ಬಂದಿದ್ದ ಅವೆಲ್ಲಾ ಬಂದ ಮೇಲೆ ಮನೆಯೊಳಗೆ ಮಣೆ ಹಾಕಿ ಕಾಲ್‌ದೀಪ ಹೊತ್ಸಿ ಕಾರ್ನೊರಿಗೆ ಇಸಿಕನ ಮೂಡೆ ಹಿಟ್ಟ್ ಇಸಿ ಕೋಳಿಗೈಪು ಹಾಕಿ, ಹುಗ್ಗೆನಾ ಬಡ್ಸಿಡ್ ಇನ್ನೊಂದು ಬಾಳೆಲೆಲಿ ಪೊಕ್ಕ ರೊಟ್ಟಿ ನಾ ಹಾಕಿದ್ ಹಗ್ಗೆನಾ ಇಕ್ಕಿ ಮತ್ತೆ ಕೋಳಿಗೈಪು ಬಡ್ಸಿ ಆ ಎರಡ್ ಎಡಗೆ ಕೇಪ್ಪಹೂ, ಎಲಾಡ್ಕೆ(ಎಲೆಅಡಿಕೆ) ಮತ್ತೆ ಒಂದು ಬಾಳೈನ ಮೂರು ಕಟ್ಮಾಡಿ ಅದರ್ಲಿ ಜೊನ್ನೆ(ಕಿಲ್ಲಿ) ಮಾಡಿ ಕುರ್ದಿನೀರ್, ಇನ್ನೊಂದರಲ್ಲಿ ಮಸಿ ನೀರ್ ಮತ್ತೊಂದರ್ಲಿ ಬೆಲ್ಲದ ನೀರ್ನಾ ಇಸುವೆ. ಮತೇ ಕೆಲವು ಮನೆಲಿ ಒಂದು ಗ್ಲಾಸ್‌ಲಿ ಬೀಜದ ಸರಾಯ ಇಸುವೆ. ಎಲ್ಲಾ ಬಡ್ಸಿ ಆದಾ ಮೇಲೆ ಗಂಧದ ದೂಪಲೀ ಶುದ್ದಮಾಡಿ ಗುರು–ಹಿರಿಯರೊಟ್ಟಿಗೆ ಮತ್ತೆ ಪಾಷಣಮೂರ್ತಿ ದೆವ್ವದೊಟ್ಟಿಗೆ ಪ್ರಾರ್ಥನೆ ಮಾಡಿ ದೀಪಕ್ಕೆ ಕೈಮುಗಿದ್ ಗಂಧ ಬೊಟ್ಟು ಹಾಕಿ ಅಲ್ಲಿಂದ ಎಲ್ಲವೂ ಹೊರಗೆ ಬರಕು ಮತ್ತೆ ಐದ್ನಿಮಿಷ ಬುಟ್ಟು ಮನೆಯ ಯಜಮಾನ ಆ ಅಗೆಲ್ಗೆ ಚೂರು ನೀರ್ ಹಾಕಿ ಬಾಳೆಎಲೆನಾ ಜಾರ್ಸಕು. ಈ ಸಮ್ಮನಾ ಮಾಡ್ದ ಎಲೆನಾ ಮನೆಯವು ಪ್ರಸಾದದ ಹಂಗೆ ಚೂರು ಚೂರು ತಕಣಕು.

ಮತ್ತೆ ಬಂದ ನೆಂಟ್ರಿಗೆ, ಬೇಸಾಯಲಿ ಸೇರ್ದವುಕ್ಕೆ ಕೋಳಿಗೈಪು, ಮೂಡೆಹಿಟ್ಟ್ ಮತ್ತೆ ಪೊಕ್ಕರೊಟ್ಟಿ ಎಲ್ಲನೂ ಊಟಕ್ಕೆ ಕೊಟ್ಟವೆ. ಆ ದಿನನ ಎಲ್ಲವೂ ಭಾರಿ ಗೌಜಿಲಿ ಕಳ್ದವೆ. ಈ ಗೌಜಿನ ಊಟನೇ 'ಕಾರ್ತಿಂಗಳ ಹರಕೆ'.

ಈಗ ತರವಾಡು ಮನೆಲಿ ಈ ಹರಿಕೆನ ಮಾಡುವೆ. ಮತ್ತೆ ಯಾರ್ ಪಂಡ್‌ಂದ ಆಚರಿಸ್ತಿದ್ದನೋ ಆ ಮನೆಲಿ ಈ ಹರಕೆನಾ ಮಾಡುವೆ. ಕಾಲ ಬದಲಾಗಿರ್ದು! ಬೇಸಾಯ ಇಲ್ಲೆ. ಆದರೆ ದೈವ–ದೇವರುಗಳ ಸಮ್ಮನಾ ಮಾಡ್ದರ ನಮ್ಮ ಹಿರಿಯವೂ ಮರ್ತತ್ಲೆ. ಇದ್ ಹಿಂಗೇನೆ ಮುಂದಿನ ಪೀಳಿಗೆಗೂ ಗೊತ್ತಾಕ್ಕು...

---

**ಸಿಂಚನ ಕೆ.ಯನ್.**
ಕುತ್ಯಾಳ, ಕುಡ್ನಕಜೆ ಮನೆ, ಕುಕ್ಕೆ ಶ್ರೀ ಸುಬ್ರಮಣ್ಯೇಶ್ವರ ಮಹಾವಿದ್ಯಾಲಯ, ಸುಬ್ರಮಣ್ಯ.



ಪುಸ್ತಕ ವಿಮರ್ಶೆ



# ಚೆಂಚಿ

• ಪಿ.ಜಿ. ಅಂಬೆಕಲ್




ಸಾಹಿತ್ಯ ಲೋಕಕ್ಕೆ ಹೆಗ್ಗಳಿಕೆನ ಕೃತಿಗಳ ಕೊಡುದರ್ಲಿ ಶ್ರೀ ಬಾರಿಯಂಡ ಜೋಯಪ್ಪನವು ಎತ್ತಿದ ಕೈ. ಅವರ ಸುರುನ ಪುಸ್ತಕ 'ಯಾರ ಬೇಟೆ ಮತ್ತು ಇತರ ಪ್ರಸಂಗಗಳು' ಕನ್ನಡಲಿ ಅದೊಂದು ಮಾನವೀಯ ನೆಲೆನ ಹೃದಯಸ್ಪರ್ಶಿ ಪ್ರಸಂಗಗಳ ಪುಸ್ತಕ. ಆ ಮೇಲೆನ ಅವರ 'ಕಾಟಿಬೆಟ್ಟದ ಕತೆಗಳು' ಕೂಡಾ ಒಂದು ವಿಸೇಸ ಕೃತಿ, ಐವತ್ತು ಅರುವತ್ತು ವರ್ಸಗಳ ಹಿಂದೆನ ಕಾಡ್ನ ರೋಮಾಂಚಕ ಅನುಭವಗಳ ಪಿಂಚಣಿ ಆದ ಮೇಲೆ ಬಾಲ್ಯದ ಕಣ್ಣ್‌ಲಿ ಕಂಡ್ ಬರ್ದ ಬರ, ಅದೊಂದು ಸಂಸ್ಕೃತಿ ಕಥನ. ಹಂಗೆ ಅವರ ಅರೆಬಾಸೆ ಸಣ್ಣ ಕತೆಗಳ ಸಂಗ್ರಹ 'ಚಾಂಪಾ' ಅರೆಬಾಸೆನ ಸುರೂನ ಕತಾ ಸಂಕಲನಂತ ಹೇಳುವ ಹೆಗ್ಗಳಿಕೆಗೆ ಪಡ್ದದ್. ಅವರ 'ತೋರಣ'ಂತ ಹೇಳ್ವ ಅರೆಬಾಸೆನ ಕವನ ಸಂಗ್ರಹಂದ ಆರ್ಸಿದ 'ಜೋಡಿ ಹಕ್ಕಿ' ಮತ್ತೆ 'ಉದಯ ರಾಗ' ಪದ ಮಾಲೆನ ಕೇಳದವೇ ಇರಿಕಿಲೆ. ಈಗ ಮತ್ತೊಂದು ಅಪ್ರೂಪದ ಲಲಿತ ಪ್ರಬಂಧಗಳ ಸಂಕಲನವೇ ಈ 'ಚೆಂಚಿ'.

ಕೊಡ್ಗ್‌ನ ಅಪ್ಪಟ ಅರೆಬಾಸೆಲಿ ಬರೆವ ಜೋಯಪ್ಪನವು ಸರಳ, ಸುಂದರ, ಲಾಲಿತ್ಯ ಪೂರ್ಣಾಗಿ ಕಣ್ಣಿಗೆ ಕಟ್ಟುವಂತ ವರ್ಣನೆ ಮಾಡೊವು. ಕೊಡ್ಗ್ ಅಂದ್ನ ಹಳ್ಳಿ ಮನೆನ ವರ್ಣನೆ ಮಾಡ್ದ ಪೋರ್ಲ್ ನೋಡಿ "ಹಿಂದೆಲ್ಲಾ ಒಂದು ಕೊತ್ತಿ, ಚೈಗೂಡಿಕೆ ಒಂದೆರ್ಡ್ ನಾಯಿಗ, ಕೊಟಗೂಡಿಕೆ ನಾಕ್ ಕೋಳಿಗ, ಸೂರ್ ಕೆಳಗೆ ಪಳ್ಳ ಬೀಳಿಕೆ ಒಂದೋ ಎರ್ಡೋ ಹಂದಿಗ,

ನಾಕ್ ನಡೆ ದನಂಗ, ಡಜನ್‌ಗೆ ನಾಕ್ ಕಮ್ಮಿಂತೇಳುವಸ್ಟ್ ಮಕ್ಕಳೂ ಇರ್ತಿದ್ದೊ, ಮಣ್ಣದೊ, ನೆರಿಕೆದೋ ಗೋಡೆ, ಹುಲ್ಲ್‌ನ ಹೊದಿಕೆ"!

ಹಿಂದೆ ಚೆಂಚಿ ಸೊಂಟಲಿ ಕೋಸಿಕಂಡ್ ಇದ್ದ ಅಜ್ಜಿಕಂದೊಳೂ ಪೊಲ್ರ್ಯಲಿ ಜೋಯಪ್ಪನವು ಯಾವ ಯಾವ ಕಾಯಿಲೆಗೆ ಯಾವ ಮೊದ್ದುಂತ ಅಂದ್ನ ಹಳ್ಳಿ ಮೊದ್ದುಗಳ ವರ್ಣಿಸಿವೆ. ಉಮಿಕರಿಲಿ ಉಪ್ಪು ಸೇರ್ಸಿಕಂಡ್ ಹಲ್ಲ್ ಉಜ್ಜುತಿದ್ದ ಅರುವತ್ತು ದಾಟಿದವೂ ಚಕ್ಕುಲಿನ ಕರುಂ ಕುರುಂ ತಿಂಬತಿದ್ದೊ, ಎಳ್ಳ್ ಉಂಡೆನೂ ಕಟುಂ ಕುಟುಂತ ಅಗೆತಿದ್ದೊ. ಅಜ್ಜಿಕ ಸೂಜಿಗೆ ನೂಲು ಹಾಕ್ತಿದ್ದೊ ಇದೆಲ್ಲಾ ಅವರ ಆರೋಗ್ಯಕ್ಕೆ ಹಿಡ್ದ ಕನ್ನೆಡಿಂತ ಹೇಳುವೆ.

ಎಪ್ಪತ್ ಎಂಬತ್ತ್ ವಯಸ್ಸಾದ ಹಿರಿಯರ್‌ಂದ ಅವರ ಅನುಭವ ಕೇಳಿ ತಿಳಿಯೊಕುಂತ ಹೇಳುವ ಜೋಯಪ್ಪನವು "ಚಿದಂಗ್ ಇಕ್ಕಿಕಾಗದ್, ಕಡ್ಪದಾಟಿಕಾಗದ್" ಇದ್ ಹಿರಿಯರ್ ಮಾಡ್ದ ಕಟ್ಟ್ ಪಾಡ್‌ಂತ ತಿಳ್ಸುವೆ. ಹಂಗೆ ಪುಸ್ತಕ, ಕಾಗದನ ಮೆಟ್ಟುದಾಗಲಿ, ಹರೆದಾಗಲಿ, ನೆಲಲಿ ಇಸುದಾಗಲಿ ಮಾಡಿಕೆ ಬೊತ್ತು, ಯಾಕೇಂತೇಳ್ರೆ ಅದ್ ಸರಸ್ವತಿ, ಹಂಗೆ ಮಾಡಿರೆ ವಿದ್ಯೆ ಹತ್ತುದುಲೆ. ಇನ್ನು ಒಲೆ ತಿಂಟೆ, ಕಡೆವ, ಬೀಸುವ ಕಲ್ಲ್, ನರ್ಗ್ಯಳಿ ಇದರೆಲ್ಲಾ ಮೆಟ್ಟಿಕಾಗದ್, ಇದೆಲ್ಲಾ ಅವ್ವನ ಎದೆಗೆ ಸಮತೇಳುವ ಗೌರವ. ಇಂತಾ ಹಲವು ಕಟ್ಟ್ ಪಾಡ್, ನಂಬಿಕೆ, ಸಂಪ್ರದಾಯಗಳ ವಿವರ್ಸ್ಯವೆ. ಹಿಂದೆನವರ ನಡೆ ನುಡಿಂತೇಳಿರೆ "ಚಿನ್ನದಂತಾ ಪೆಟ್ಟಿಗೆ, ಚಿನ್ನಾರಿ ಪೆಟ್ಟಿಗೆ, ಮುಚ್ಚೊಳ ತೆಗ್ದರೆ ಮುನ್ನೂರು ಪೆಟ್ಟಿಗೆ" ಹೌದು ಆದರೆ ಮುಚ್ಚೊಳ ತೆಗೆವ ಮನ್ಸ್ ನಾವ್ಗೆ ಬೇಕು ಅಸ್ಟೆ.

ಬೇಸಾಯ ಮಾಡಿ ಉಂಬತಿದ್ದ ಜೆನ ನಾವು. ನಮ್ಮ ಬೇಸಾಯದ ರೀತಿ ನೀತಿಗಳ ಜೋಯಪ್ಪನವು ಸೊಗಸಾಗಿ ವರ್ಣಿಸುವೆ. ರೈತಂಗೆ ಬೇಕಾದ ಸಲಕರಣೆಗಳ ರೈತನೇ ಮಾಡ್ಕಂಬತಿತ್ತ್, ಅವಂಗೆ ಯಾವ ತರಬೇತಿನೂ ಇತ್ಲೆ, ಸರ್ಟಿಫಿಕೇಟ್‌ನೂ ಬೇಕಾಗಿತ್ಲೆ, ನೋಡಿ ತಿಳಿ, ಮಾಡಿ ಕಲಿಂತೇಳುವ ತತ್ವ ಅವಂದ್‌ತ ಹೇಳ್ವೆ. ಅಂದ್ನ ಹೂಡುವ ಎತ್ತುಗ ಸಾ ಮೊನ್ಸರ್‌ಂದಲೂ ಹೆಚ್ಚಿ ತಿಳ್ದವರಾಂಗೆ ಬೊಳ್ಪಾಕೆ ಮುಂದೆ ಹಟ್ಟಿಗೆ ಹೋದರೂ ಸಾಕ್ ಹೂಟೆ ಎತ್ತುಗ ಮಾತ್ರ ಎದ್ದ್ ನಿತ್ತ್, ಉಚ್ಚೆ ಹೊಯ್ದ್, ಸೆಗ್ಣಿ ಹಾಕಿ ಹೂಡಿಕೆ ಹೋಕೆ ತಯಾರಾಗಿ ನಿತ್ತ್ ಕಂಬೊತ್ತಿದ್ದೊಂತ ಹೇಳುವೆ. ಇನ್ನು ಹೂಟೆ, ಬೀಜ ಹಾಕುದು, ಅಗೆ ಕೀಳ್ದು, ನಾಟಿ ನೆಡ್ದು, ಪೈರ್ ಬೆಳೆವ

ರೀತಿ, ಕೊಯ್ಲ್, ಬೆಳೆ ಹೊರ್ದು, ಮೆದೆ ಬುಡ್ದು, ಒಕ್ಲು ಕೆಲ್ಸ ಇದರ್ನೆಲ್ಲಾ ಬಾರಿ ಲಾಯಿಕ್ಲಿ ವಿವರ್ಸಿವೆ. ಮತ್ತೊಂದು ಕಡೆ ದುಡ್ಡುನ ಇಕ್ಕಟ್ಟಿಗೆ ಕರ್ ಬುಡುವ ಹಸುನ ಮಾರ್ವ ಸಂಕಟನ ಓದುಗರೂ ಸಂಕಟ ಪಡುವಾಂಗೆ ಕಟ್ಟಿ ಕೊಡುದರ ನೋಡಿ "ಹಾಲ್ ನೊರೆ ನೊರೆಯಾಗಿ ಚೊಂಬು ತುಂಬಿತ್, ಹಂಗೆ ಅವ್ವನ ಕಣ್ಣ್‌ಲಿ ನೀರೂ ತುಂಬಿತ್, ಮಕ್ಕ ಕುಸು ಕೂಡಿಕಂಡ್ ಕಣ್ಣ್‌ನ ಸೀಟಿಕಂಡ್ ಮೂಲೆಲಿ ಕುದ್ದಿದ್ದೊ. ಮನೆಯವು ಯಾರೂ ಯಾರೊಟ್ಟಿಗೂ ಮಾತಾಡದೆ ಇಡೀ ಮನೆ ಮೌನ ಆಗಿತ್ತ್. ಕೊತ್ತಿ ಸಾಯಂಕಾಲದ ಹಾಲ್‌ನ ಗ್ಯಾನ ಮಾಡಿಕಂಡ್ ಕುದ್ದಂಗೆ ಜಗಲ್ ಮೂಲೆಲಿ ಕುದ್ದಿತ್, ನಾಯಿಗ ಮಾತ್ರ ಬೊಗ್ಳುದು ನಿಲ್ಸಿ ಹಸ್ ಹೋದ ದಾರಿ ಕಡೆ ನೋಡಿಕಂಡ್ ಕುಂಯಿಗುಟ್ಟಿಕಂಡ್ ಸಂಕಟ ಪಡ್ತಿದ್ದೊ!

ಮೊನ್ನನ ಬೊದ್ಕುಲಿ ಮೊದುವೆ ಒಂದು ಮಹತ್ತರ ಘಟ್ಟ. ಆ ಮೊದುವೆನ ಬಾಕಿ ಎಲ್ಲಾ ವಿಸಯಗಳ್‌ಂದಲೂ ಹೆಚ್ಚಿಗೆ ಎಂಟತ್ತ್ ಪುಟಲಿ ವರ್ಣಿಸುವೆ. ಮೊದುವೆಗೆ ಗೂಡೆ ನೋಡಿಕೆ ಹೋವ ಕ್ರಮಂದ ಹಿಡ್ದ್, ಚಪ್ಪರ, ಮೂರ್ತ, ದಂಪತಿ ಮೂರ್ತ, ಅರ್ಕೇರಿನ ನೀರ್ ಮೊದುವೆ ವರೆಗೆ ಸವಿವರವಾಗಿ ವಿವರ್ಸುವೆ. ಮೊದುವೆಲಿ ಎಲ್ಲವು ಹೆಚ್ಚಿ ಕುಸಿ ಪಡ್ದು ವಾಲಗ ಕೊಣ್ತತಾನೆ? ವಾಲಗಕ್ಕೆ ತಕ್ಕ ಹಾಂಗೆ ಕೊಣಿದು ಒಂದು ಕಲೆ, ಕೆಲವರ ಕೊಣ್ತ ನೋಡ್ದೇ ಒಂದು ಪೊರ್ಲು. ನಡೆಕೆ ಕಲ್ತ ಮಕ್ಕಳ್‌ಂದ ಹಿಡ್ದ್ ನಡೆಕೆ ತಾಕತ್ ಇರುವ ಹಿರಿಯವುಸನ್ ಕೊಣಿತಿದ್ದೊ. ನಡು ವಯಸ್ನವರ ಕೈಲಿ ಗಲಾಸ್ ಇರ್ತಿತ್, ಗಲಾಸ್ಲಿ ಇರುವ ಕಳ್ಳ್ ಒಂದು ತುಳಿ ತುಳ್ಕದಾಂಗೆ ಎಚ್ಚರ ವಹಿಸಿಕಂಡ್ ಒಂದೊಂದೇ ಗುಟುಕು ಕುಡ್ಕಂಡ್ ಕೊಣಿತಿದ್ದೊ. ಮತ್ತೆ ಕೆಲವು ಬೀಡಿನೋ ಸಿಗರೇಟ್ ನೋ ಸೇದಿಕಂಡ್ ಹೆಜ್ಜೆ ಹಾಕ್ತಿದ್ದೊ, ಯಾರ್ಯಾರಿಗೋ ಮುಟ್ಟಿರೂ ಗೊತ್ಲೆ, ಸುಟ್ಟರೂ ಗೊತ್ಲೆ, ಹೆಟ್ಟಿಕಂಡ್, ಕುಟ್ಟಿಕಂಡ್ ಮೆಟ್ಟಿಕಂಡ್, ರಟ್ಟಿಕಂಡ್ ಕೊಣೆತಿದ್ದೋಂತ ಬಾರೀ ಲಾಲಿತ್ಯ ಪೂರ್ಣವಾಗಿ ವರ್ಣಿಸುವೆ. ಇನ್ನು ಕೊಣ್ತಲಿ ಹಾವಾಟ ತರದ ಕೊಣ್ತನ ವರ್ಣಿಸಿದ ಪೊರ್ಲುನ ಓದೊಕು. ವಾಲಗ ಉರ್ಗುದು, ಡೋಲು ಬಾರ್ಸುದು ಈ ಕೊಣ್ತಗ ಎಲ್ಲಾ ಒಂದು ಜಾನಪದ ಕಲೆ, ನೋಡೊವುಕೆ ಕುಸಿ, ನೆಗೆ. ಕೆಲವು ಸತಿ ನೆಗೆ ಹೊಗೆ ಆಗಿ ಬುಟ್ಟದೆ, ಎಲ್ಲೋ ಹುಟ್ಟಿಕಂಡ ಸಿಟ್ಟ್ ಇನ್ನೆಲ್ಲೋ ರಟ್ಟಿ ಮೊದುವೆ ಜಂಬರ ಗೋಳಾದೂ ಉಟ್ಟೂಂತ ಹೇಳುವೆ. ಇನ್ನು ಮೊದುವೆಲಿ ಹೆಣ್ಣ್

ಕರ್ಕಂಡ್ ದಿಬ್ಬಣ ಬಾದರ ವರ್ಣನೆ ನೋಡಿ "ಕಾಡ್ ದಾರಿ, ಗದ್ದೆ ಏರಿ, ತೋಡ್ ಇಳ್ದ್, ಕಡ್ಕಲ್ ಹತ್ತಿ, ಎಡ್ಗಿಕಂಡ್, ರಟ್ಟಕಂಡ್ ಹೆಣ್ಣ್ ಕರ್ಕಂಡ್ ಬಾಕನ ಕೋಳಿ ಕೂಂಗುವ ಹೊತ್ತಾತಿತ್. ಮತ್ತೆ ಬೆಳಿಗ್ಗೆ ಹತ್ತ್ ಹತ್ತುವರೆಗೆ ದಂಪತಿ ಮೂರ್ತ. ಗೂಡೆದ್ ಗೋಳು., ಯಾಕೆತೇಳ್ರೆ ಗೂಡೆ ಮನೆಲಿ ಒಂದು ಚಪ್ಪರ, ಮಾರ್ನೆಗೆ ಮೂರ್ತ, ಅದೇ ಇರ್ಲ್ ದಿಬ್ಬಣ, ಅದೋ ಕಾಡ್ ದಾರಿಲಿ ನಡ್ದೇ ಹೈದನ ಮನೆ ಸೇರ್ದು., ಮತ್ತೆ ದಂಪತಿ ಮೂರ್ತ, ಅಷ್ಟೇ ಅಲ್ಲ ಗದ್ದೆಗೆ ಗೊಬ್ಬರ ಹೊರೊಕು, ಬಾಕನ ನೀರ್ ತರೊಕು. ಈ ಎಲ್ಲಾ ಶಾಸ್ತ್ರ ಆಕನ ಗೂಡೆ ಕಟ್ಟಿದ ಕೋಳಿನಾಂಗೆ ಒರ್ಗಿ ನಿಲ್ಲಿಕೂ ತ್ರಾಣ ಇಲ್ಲದಷ್ಟ್ ಸುಸ್ತಾಗಿದ್ದದೆ" ಹೀಂಗೆ ಎಲ್ಲದರ ವಿವರ್ಸುವೆ. ಇನ್ನು ಮೊದುವೆಲಿ ಕೊಣ್ತುದೊಟ್ಟಿಗೆ ಕುಡ್ತನೂ ಇದ್ದದೆ ತಾನೆ? ಸುಮಾರ್ ಅರುವತ್ತ್ ಎಪ್ಪತ್ತ್ ವರ್ಸಗಳ ಹಿಂದೆ ಮೊದುವೆ ಚಪ್ಪರದ ಊಟಕ್ಕೆ ಕಳ್ಳ್ ಕುಡೆಕೆ ಕೊಡುವ ಪದ್ಧತಿ ಇತ್ಲೆ ಗಡ. ಆ ಮೇಲೆ ಊಟ ಮಾಡಿಕನ ಕಳ್ಳ್ ಕೊಡಿಕೆ ಸುರಾತ್, ಬೈನೆ ಕಳ್ಳ್, ನಾಡ್ ಸರಾಯಿ, ಬತ್ತದ ಸರಾಯಿ, ಗೇರ್ ಹಣ್ಣ್ ಸರಾಯಿ ಇದ್ದದ್ ಕಾಲ ಕಳೀತಿದ್ದಾಂಗೆ ಕಾಟಿ ಸರಾಯಿ ಬಾತ್ ಗಡ, ಅದ್ ಹೋಗಿ ರಮ್ಮ್, ವಿಸ್ಕಿ, ಬ್ರಾಂಡಿಂತೆಲ್ಲಾ ಬಾತ್, ಇದೆಲ್ಲಾ ಚಪ್ಪರದ ಊಟಕ್ಕೆ ಮಾತ್ರ ಇದ್ದದ್, ಮತ್ತೆ ಮೂರ್ತದ ಮಧ್ಯಾಹ್ನದ ಊಟಕ್ಕೂ ಕೊಡಿಕಿ ಸುರಾತ್. ಅಷ್ಟೇ ಅಲ್ಲ ಈಗೀಗ ಮೂರ್ತದ ದಿನ ಸನ್ 'ಓಪನ್ ಬಾರ್' ಇದ್ದದೆ. ಅದೊಂದು ರೀತಿನ ಪ್ರತಿಷ್ಠೆ ಆಗೋಗುಟು. ಕೈಲಿ ಗಲಾಸ್ ಇಲ್ಲದವರ ಹುಡ್ಕಿಕಾದೆ. ಮುಂದೆ ಅದ್ ಎಲ್ಲಿಗೆ ಬಂದ್ ನಿತ್ತದೆಯೋ ಏನೋಂತ ಜೋಯಪ್ಪನವು ನಮ್ಮ ಸಮಾಜದ ಬಗ್ಗೆ ಕಳಕಳಿ ವ್ಯಕ್ತ ಪಡ್ಸುವೆ.

ನಮ್ಮದ್ ಹತ್ತ್ ಕುಟುಂಬ ಹದಿನೆಂಟ್ ಬಳಿ ತಾನೆ? ಹಂಗೆ ಜೋಯಪ್ಪನವು ಪಂಡ್ನ ಕಾಲದ ಯಾವುದರೂ ಬುಡ್ದುಲೆ, ಹದಿನೆಂಟ್ ವಿಸಯಗಳ ಬಗ್ಗೆ ವಿವರ್ಸುವೆ. ಆಗನ ಸಾಲೆನ ಕತೆ ಹೇಳ್ದೇ ಬೇಡ ಮಕ್ಕ ಸಾಲೆಗೆ ನಡ್ಕಂಡ್ ಹೋತಿದ್ದ ಪಾಡ್, ಕಾಡ್ದಾರಿಲಿ ಹೋಕನ ಸಿಕ್ಕ್ ತಿದ್ದ ಪ್ರಕೃತಿನ ಪಾಠ. ಮಕ್ಕಳಿಗೆ ನಾಟಿ, ಕೊಯ್ಲ್ ಸಮೆಲಿ ರಜೆ ಸಿಕ್ಕಿ ಮನೆವುಕೆ ಸಹಾಯ ಆತಿದ್ದದ್, ಮಕ್ಕಳೂ ಆ ಕೆಲ್ಸಗಳ ಕುಸೀಂದ ಕಲಿಯತಿದ್ದದರ ಹೇಳುವೆ. ಆದರೆ ಸಾಲೆಲಿ ಕೆಲವು ಮಾಸ್ಟ್ರಗ ಕೊಡ್ತಿದ್ದ ಇಪರೀತ 'ಹೋಂ ವರ್ಕ್' 'ಇಂಪೊದಿಸನ್'ಗಳ್ಂದ ಮಕ್ಕಳಿಗೆ ಕಲಿಕೆನ

ಆಸಕ್ತಿನೇ ಇಲ್ಲದಾಂಗೆ ಆತಿದ್ದದರ ತಿಳ್ಸಿ, ಮಾಸ್ಟ್ರ್‌ಗ ಮಕ್ಕಳ ಮನಃಶಾಸ್ತ್ರನ ತಿಳ್ಕಣೊಕೂಂತ ಕೆಬಿಮಾತ್ ಹೇಳುವೆ.

ನಮ್ಮ ಜೋಯಪ್ಪನವು ಈ 'ಚೆಂಚಿ'ನ ಮೂಲಕ ನಮ್ಮ ಸಂಸ್ಕೃತಿನ ಸಾಗರಲಿ ಅಡ್‌ಂಗಿರುವ ಮುತ್ತು, ರತ್ನಗಳ ಹೆರ್ಕಿ ತೆಗ್ದೊಳೊ. ನಮ್ಮ ಪಂಡ್‌ನ ರೀತಿ ನೀತಿಗಳ, ಕಟ್ಟ್ ಪಾಡ್ಗಳ, ಸಂಪ್ರದಾಯ ನಂಬಿಕೆಗಳ ನಿಪುಣತೆಂದ ಕಟ್ಟಿಕೊಟ್ಟೊಳೊ. ಇದರೊಟ್ಟಿಗೆ ಅರೆಬಾಸೆನ ಅನನ್ಯತೆನ ಎತ್ತಿ ತೋರ್ಸುವ ಹಲವಾರ್ ಪದಗ ಇವರ ಅರೆಬಾಸೆನ ಹಿಡ್ತಕ್ಕೆ ಸಾಕ್ಷಿ ಆಗುಟ್ಟು. ಸಂಸ್ಕೃತಿ ಮತ್ತೆ ಸಾಹಿತ್ಯ ಒಂದಕ್ಕೊಂದು ಪೂರಕ, ಸಾಹಿತ್ಯ ಬೆಳ್ದರೆ ಮಾತ್ರ ಬಾಸೆ ಒಳಿಯಕೆ ಸಾದ್ಯಂತ  ನನ್ನ ಅಭಿಪ್ರಾಯ. ಇವರ ವಿಸಯ ನಿರೂಪಣೆಲಿ ಬರುವ ಅಪ್ಪಟ ಅರೆಬಾಸೆ ಪದಗಳ ಒಮ್ಮೆ ನೋಡಿ "ಗೊರ್ಜಿ ಗದ್ದೆ, ಸೋಲೆ ಗದ್ದೆ, ಉಯ್ಯಪಾರ್, ಕಣಿಕೋಲು, ತಮ್ಮಿಹಗ್ಗ, ಮೇಚಿ, ದೋಂಬಾದು, ಚುಗ್ಗುದು, ಪರ್ಮಲ್, ಬೇಟಿ, ಪಾತುದು, ಉಕ್ಕುಡೆ,ಮೋಂದಾಯ, ಅಂಜರ, ಚದಲೆ, ಕಚಾಯಿಸ್, ಕೊಂಬಟೆ ಹಲ್ಲ್, ಎಣೆ ಮಕ್ಕ" ಹೀಂಗೆ ಅರೆಬಾಸೆ 'ಸೊಗಡುನ' ಅನೇಕ ಪದಗ ಒಳೊ. ಇಂತಾ ಪದಗಳ ಇಂದ್ನ ಯುವಪೀಳಿಗೆಗೆ ಖಂಡಿತಾ ಗೊತ್ತಿರ್ಕಿಲ್ಲೆ. ಅರೆಬಾಸೆ ಒಳಿಯಕೆ, ಬೆಳಿಯಕೆ ಇಂತ ಪುಸ್ತಕಗಳ ಕೊಡುಗೆ ಅನನ್ಯವಾದೆ. ಜೋಯಪ್ಪನವರ ಲೇಖನಿಂದ ಇನ್ನೂ ಅನೇಕ ಅರೆಬಾಸೆ ಕೃತಿಗ ಬೆಳಕ್ ಕಾಣಲಿಂತ ಹಾರೈಸೊಮೊ.

**ಪಿ.ಜಿ. ಅಂಬೆಕಲ್**
# A 315, ಆರ್ಟಸ್ – 2, ಶ್ರೀ ಲಕ್ಷ್ಮೀನಾರಾಯಣ ದೇವಾಲಯದ ಹತ್ತಿರ,
ಅಮೃತಹಳ್ಳಿ, ಬೆಂಗಳೂರು – 560092.
ಮೊ. ಸಂ.9481390089.




# ಏಡಿರಾಯನ ಕಥೆ

- ಕಾಳೆಯಂಡ ತಂಗಮ್ಮ ಅಪ್ಪಚ್ಚ

ಒಂದಾನೊಂದು ಊರಲ್ಲಿ ಲಿಂಗಪ್ಪನ ಮನೆ ಇತ್ತ್. ಅವನ ಹೆಣ್ಣ್‌ನ ಹೆಸರ್ ಗೌರಿ. ಅವಳ ಮಗಳ ಹೆಸರ್ ಸುಮತಿ, ಅವಳ್ ಸ್ಕೂಲ್‌ಗೆ ಹೋಗ್‌ತ ಇತ್ತ್. ಒಂದು ದಿನ ಅವಳ ಅವ್ವಂಗೆ ಉಸರು ಇರ್ದ್‌ಲೆ. ಸುಮತಿಗೆ ಹದಿನೈದು ವರ್ಷ

ಪ್ರಾಯ. ಹತ್ತನೆ ಕ್ಲಾಸ್ ಓದುತ ಇತ್ತ್. ಅವಳ ಅವ್ವ ಹೊಟ್ಟೆ ಬೇನೆ ಜೋರಾಗಿ ಸತ್ತು ಹೋದೆ. ಲಿಂಗಪ್ಪ ಸುಮತಿನು ಗೋಳಾಡುವೆ. ಆಗ ನೆರೆಮನೆವು ಊರವು ಬಂದ್ ಸೇರ್‌ವೆ. ಬಂದ ಜನಂಗ ಸೌದೆ ಕಡ್ದ್ ಗೌರಿನ ಕಾಟಕೆ ಹಾಕಿ ಸುಟ್ಟವೆ. ಸ್ವಲ್ಪ ಕಳ್ದ ಮೇಲೆ ಅವಳ ತಿಥಿ ಕರ್ಮ ಮಾಡ್‌ವೆ. ಲಿಂಗಪ್ಪಗೆ ಮನೆ ಕೆಲಸ ಮಾಡವು ಯಾರಿಲ್ಲೆ. ಲಿಂಗಪ್ಪ ಇನ್ನೊಂದು ಮದುವೆ ಆದೆ. ಅವಳ ಹೆಸರ್ ಗಂಗೆ. ಅವಳಿಗೆ ಒಂದು ಹೆಣ್ಣ್ ಕೂಸು ಆದೆ. ಬೆಳಿತ್ತ ಬೆಳಿತ್ತ ದೊಡ್ಡವಳಾತ್ತ್. ಸ್ಕೂಲ್‌ಗೆ ಹೋಗ್‌ತ ಇತ್ತ್. ಅವಳ ಹೆಸರ್ ಕುಮತಿ. ಚಿಕ್ಕಮ್ಮಂಗೆ ಸುಮತಿನ ಕಂಡರೆ ಆದುಲೆ. ಅವಳ ಕೈಯಲ್ಲಿ ಎಲ್ಲಾ ಮನೆ ಕೆಲಸ ಮಾಡ್ಸುದು. ಅವಳಿಗೆ ಕೋಲ್ ತಕಂಡ್ ಹೊಡೆದು ಬೆನ್ನಿಗೆ ಗುದ್ದುದು ಎಲ್ಲಾ ತರಲ್ಲಿ ಅವಳಿಗೆ ಹಿಂಸೆ ಕೊಡ್ತ್‌ತ್ತ್. ಇದನೆಲ್ಲಾ ನೋಡದ ಸುಮತಿ ಮರ್‌ಡಿಕೆ ಸುರುಮಾಡ್ತ್. ನನ್ನ ಅವ್ವ ಇದ್ದಿದ್ದರೆ ಈ ತರದ ಕಷ್ಟ ನಂಗೆ ಇತ್ತ್‌ಲ್ಲೆಂತ ಗ್ಯಾನ ಮಾಡಿ ಸುಮತಿ ಮನೆ ಬಿಟ್ಟ್ ಹೋದೆ. ಹೋಗ್‌ತ ಹೋಗ್‌ತ ಒಂದು ಮೈಲ್ ದೂರಲ್ಲಿ ದೊಡ್ಡ ಹೊಳೆ ಇದ್ದದ್ದೆ. ಹೊಳೆ ದಂಡೆಲಿ ಒಂದು ಗೋಳಿಮರ ಇದ್ದದ್ದೆ. ಆ ಗೋಳಿಮರ ದೊಡ್ಡ ಚಪ್ಪರದಂಗೆ ಇತ್ತ್. ಸುಮತಿ ಅತ್ತ್‌ಕಂಡ್ ಆ ಮರದಡಿಲಿ ಕುದ್ದಿದ್ದದೆ. ಆಗ ಶಿವನು ಪಾರ್ವತಿನು ಮೇಲೆ ಹೋಗುತ್ತಿದ್ದವೆ. ಸುಮತಿ ಅಳುದನ್ನು ಕೇಳಿ ಈಶ್ವರನು ಪಾರ್ವತಿನು ಬಂದವೆ. ಸುಮತಿನ ವಿಚಾರ್‌ಸುವೆ. ಅವುಳ್ ಆದ ಹೋದ ಸಂಗತಿನ ಹೇಳ್ತ್. ಸುಮತಿನ ಸಮಾಧಾನ ಮಾಡಿ ಮೂರು ಕಲ್ಲುಗಳ ಮಂತ್ರಿಸಿ ಕೊಟ್ಟವೆ. ಈ ಕಲ್ಲ್‌ಗಳ ಮೂರು ದಿಕ್ಕ್‌ಗಳಿಗೆ ಹಾಕ್. ಒಂದು ದಿಕ್ಕ್‌ಗೆ ಹಾಕ್‌ಕನ ಹೊಳೆಂದ ಏಡಿರಾಯ ಜಳಂಭಳಂತ ಹೇಳಿಕಂಡ್ ಬಾತ್. ಹೆದರ್‌ಬ್ಯಾಡ ಇನ್ನೊಂದು ಕಲ್ಲ್ ಹಾಕ್. ಏಡಿರಾಯನ ಕೊಂಬು ಚಿರಿಕಾಲೆ ಮುರ್ದ್ ಹೋದೆ. ಮತ್ತೊಂದು ಕಲ್ಲ್ ಹಾಕ್ ಮನುಷ್ಯ ಆಗಿ ನಿನ್ನ ಗಂಡ ಆಗಿ ತಬ್ಬಿಕಂಡದೆ. ಅಲ್ಲಿಂದ ಸುಮತಿ ಏಡಿರಾಯಂತ ಅವರಿಬ್ಬರ ಹೆಸರಾತ್. ಹಂಗೆ ಹೇಳಿ ಈಶ್ವರನು ಪಾರ್ವತಿನು ಮಾಯ ಆದೊ. ಚಿಕ್ಕಮ್ಮಂಗೆ ಮನೆಲಿ ಅಡಿಗೆ ಮಾಡವು ಯಾರಿಲ್ಲೆ ತನ್ನ ಮಗಳ್ ಸುಮತಿ ಹಾಸಿಗೆಂದ ಎಳ್ದುಲ್ಲೆ. ಯಾವ ಕೆಲಸನು ಮಾಡ್ದುಲ್ಲೆ. ಹೆಂಗೆ ಕೆಲಸ ಮಾಡಕುತೇಳಿ ಗೊತ್ತ್‌ಲೆ. ಲಿಂಗಪ್ಪ ಬಂದ್ ಹೆಣ್ಣಿ ಗಂಗೆನ ಕೇಳ್ದೆ. ಸುಮತಿ ಎಲ್ಲಿಂತ, ಗಂಗೆ ಸುಳ್ಳು ಹೇಳ್ದೆ, ನೆಂಟರ ಮನೆಗೆ ಹೊಗುಟ್. ನಾಳೆ ಬಂದದ್ದೆ ಅಂತ ಹೇಳ್ತ್. ಸುಮತಿನು ಏಡಿರಾಯನೂ ಎಲ್ಲೋ ಒಂದು ಊರ್ಲ್ ಗುಡಿಸಲ್ಲ್ ಮನೆ ಕಟ್ಟಿಕಂಡ್ ವಾಸ ಇದ್ದವೆ. ಸುಮತಿನ ಚಿಕ್ಕಮ್ಮ ಬಹಳ ದ್ರೋಹಿ ಹೆಂಗಸ್. ಸುಮತಿನ ಕಡೆ ನೆಂಟ್ರ್ ಬಂದರೆ ಅವ್ಕೆ ಊಟ ಕೊಡ್ದು, ಗಂಜಿ ಅನ್ನ ಕುಡಿಯಕೆ ಮೆಣಸಿನ ನೀರ್. ಅವರ

ನೆಂಟ್ರ್ ಬಂದರೆ ಬಿರಿಯಾನಿ ಮಾಂಸದ ಊಟ ಹಿಂಗೆ ಗದ್ದಳ ಮಾಡ್ತಿತ್ತ್.

ಮನೆಗೆ ಯಾರಾದರ್ ಬಿಕ್ಷೆವು ಬಂದರೆ ಗಂಗೆ ಗುಂಡ್‌ಕಲ್ಲ್‌ನ ಬಿಕ್ಷೆ ಬಂದವುಕ್ಕೆ ಕೊಡ್ತಿತ್ತ್. ಬಿಕ್ಷೆ ಬಂದವು ಶಾಪ ಹಾಕಂಡ್ ಹೋಗ್ತಿದೊ. ಸುಮತಿ ಅನ್ನ ಬಾಳಗೆ ಹಾಕಿಕೊಟ್ಟರೆ ಅನ್ನನ ಕಾಲಲ್ಲಿ ವದ್ದ್ ರಟ್ಟ್‌ಸಿ ಹಾಕ್‌ತಿತ್ತ್. ಹಿಂಗೆಲ ಹಿಂಸೆ ಮಾಡ್ತಿತ್ತ್. ಅಪ್ಪ ಲಿಂಗಪ್ಪ ಮಗಳ್ ಮನೆಗೆ ಹೊಕೆ ಊರ್‌ವಳಗೆ ಹುಡಿಕಂಡ್ ಹೋದೆ. ಸುಮತಿನು ಏಡಿರಾಯನು ಒಂದು ಗುಡಿಸಲ್ಲ್ ಮನೆ ಒಳಗೆ ಇರ್ದನು ಕಂಡದೆ. ಅಪ್ಪ ಮಗಳ ನೋಡಿ ಬೇಸರ ಪಟ್ಟದೆ. ಸುಮತಿ ಏಡಿರಾಯನು ಲಿಂಗಪ್ಪನ ಕಾಲಿಗೆ ಅಡ್ಡ ಬಿದ್ದದೆ. ಸುಮತಿ ಮತ್ತು ಏಡಿರಾಯನಿಗೆ ಒಂದು ಹೊತ್ತು ಊಟಕೆ ಅಕ್ಕಿಲ್ಲೆ. ಏಡಿರಾಯ ಕಾಡಿಗೆ ಹೋಗಿ ಒಂದು ಹೊರೆ ಸೌದೆ ತಂದ್ ಊರ ಒಳಗೆ ಮಾರಿ ಒಂದೆರಡು ರೂಪಾಯಿ ಹಣ ಸಿಕ್ಕಿರೆ ಸುಮತಿಗೆ ಅಕ್ಕಿ ತಂದ್ ಕೊಟ್ಟದೆ. ಅದನ್ನ ಅನ್ನ ಮಾಡಿ ಸುಮತಿ ಗಂಡನ ಕರ್ದ್ ಬಾಳಗೆ ಬಡಿಸಿಕೊಟ್ಟದೆ. ಸುಮತಿಗೆ ಅನ್ನ ಇಲ್ಲದರ ನೋಡಿ ಇವನ ಬಾಳೆಎಲೆಯಲ್ಲಿ ಸತಿ ಪತಿ ಇಬ್ಬರೂ ಊಟ ಮಾಡುವೆ. ಏಡಿರಾಯ ಸುಮತಿನ ತುಂಬಾ ಪ್ರೀತಿಯಿಂದ ನೋಡ್ತಿತ್ತ್. ಏಡಿರಾಯ ಯಾಗಳು ಸೌದೆ ಮಾರಿ ಜೀವನ ಮಾಡ್ತ್‌ತ್ತ್. ಒಂದು ದಿನ ಸೌದೆ ತಕಂಡವು ದುಡ್ಡು ಕೊಟ್ಟತ್ತ್‌ಲೆ. ಆ ದಿನ ಊಟಕೆ ಅಕ್ಕಿಲೆ. ಏಡಿರಾಯ ತುಂಬಾ ದೇವರ ಭಕ್ತ. ಆ ದಿನ ಊಟಕೆ ಇಲ್ಲದೆ, ಸಿಹಿ ಕುಂಬಳ ಸೊಪ್ಪು ತಂದ. ಉಪ್ಪು ಇಲ್ಲದೆ ಬೈಸಿ ಇಟ್ಟಳೊ. ಸುಮತಿಗೆ ಒಂದು ಕಂಚಿನ ಬಟ್ಲ್ ಇತ್ತ್. ಶಿವನು ಪಾರ್ವತಿನು ಅಲ್ಲಿಗೆ ಬಂದವೆ ಬಿಕ್ಷೆ ಕೇಳ್‌ವೆ. ಮತ್ತೆ ಊಟಕೆ ಕುದ್ದವೆ. ಅನ್ನ ಇಲ್ಲೆ ನಮ್ಮಲ್ಲಿ ಬೈಸಿದ ಸೊಪ್ಪು. ಉಪ್ಪು ಇಲ್ಲೆ. ಒಂದು ಕಂಚಿನ ಬಟ್ಲ್ ಇರ್ದು ಹೆಂಗೆ ಕೊಡುದಂತ ಏಡಿರಾಯ ಬೇಜರ ಮಾಡ್ದೆ. ನಮಗೆ ಒಂದ್ ಬಟ್ಲ್ ಸಾಕ್ ನಾವು ಸತಿ ಪತಿಯರು ಅಂತ ಹೇಳಿವೆ. ಬೈಸಿದ ಸೊಪ್ಪನ್ನು ಬಟ್ಲ್‌ಗೆ ಹಾಕಿಕೊಟ್ಟ. ಶಿವನು ಪಾರ್ವತಿನು ಬೇಯ್ಸಿದ ಸೊಪ್ಪುನ ಲಾಯ್ಕಾಗಿ ತಿಂದೊ. ಬಾರಿ ಲಾಯ್ಕ ಆಗಿ ಹೇಳಿ ಸುಮತಿಗೆ ಏಡಿರಾಯನಿಗೆ ನಿಮಗೆ ಏನೆಲ್ಲ ಬೇಕೋ ಅದೆಲ್ಲಾ ಆಗಲಿ. ಮೊದಲು ಕಂಚಿನ ಬಟ್ಲ್‌ಗೆ ಒಂದು ಬಾಳೆಹಣ್ಣು ಹಾಕಿ ಆಮೇಲೆ ದುಡ್ಡು ಹಾಕಿ. ಹಂಗೆ ವರ ಕೊಟ್ಟ್ ಹೋದವೆ. ಏಡಿರಾಯ ಬಟ್ಲ್‌ಗೆ ಒಂದು ಬಾಳೆಹಣ್ಣ್ ಹಾಕಿತ್ತ್. ಬಟ್ಲ್ ತುಂಬಾ ಬಾಳೆಹಣ್ಣ್ ಆತ್ತ್. ಒಂದು ಕುಕ್ಕೆಗೆ ಬಾಳೆಹಣ್ಣ್ ಹಾಕಿತ್ತ್. ಒಂದು ಕುಕ್ಕೆ ತುಂಬಾ ಬಾಳೆಹಣ್ಣಾತ್. ಹಂಗೆ ಬಟ್ಲ್‌ಗೆ ಒಂದು ರುಪಾಯಿ ಹಾಕಿತ್ತ್. ಬಟ್ಲ್ ತುಂಬಾ ಹಣ ಆತ್ತ್. ಅಂವಗೆ ಏನೆಲ್ಲಾ ಬೇಕೊ ಅದೆಲ್ಲ ಆತ್ತ್. ಏಡಿರಾಯ ಊರಿಗೆ ಶ್ರೀಮಂತ ಆತ್. ಊರ್ ಜನಂಗ ಎಲ್ಲಾವು ಏಡಿರಾಯನ

ಹತ್ತಿರ ಬಾಕೆ ಸುರು ಮಾಡ್ದ. ಸುಮತಿ ಏಡಿರಾಯನು ಬಂದವುಕೆ ದಾನ ಕೊಡಿಕೆ ಸುರು ಮಾಡ್ದ. ಬಟ್ಟೆ ಬೇಕಾದವುಕೆ ಬಟ್ಟೆ, ಹಣ ಬೇಕಾದವುಕೆ ಹಣ, ಮನೆಲಿ ಏನೆಲ್ಲಾ ಉಟ್ಟು ಅದನೆಲ್ಲಾ ದಾನ ಕೊಡುತ್ತಿದ್ದೊ. ಇವರ ಪರೀಕ್ಷೆ ಮಾಡಿಕೆ ಪುನಃ ಬಂದವೆ. ಶಿವನು ಪಾರ್ವತಿ ಬಂದ್ ನಿಮ್ಮ ಬಟ್ಲ್ ನಮಗೆ ಕೊಡಿ, ಊಟ ಮಾಡಿಕೆಂತ. ಸುಮತಿ ಏಡಿರಾಯನು ಇಬ್ಬರು ಸೇರಿ ಶಿವಂಗೆ ಪಾರ್ವತಿಗು ಬಟ್ಲ್ ಕೊಟ್ಟವೆ. ಸುಮತಿ ಏಡಿರಾಯನು ಹಿಂದೆ ಯಾವ ರೀತಿಲಿ ಬದಕುತ್ತಿದೊ ಅದೇ ರೀತಿಲಿ ಅವಕೆ ಬದಕಿಕೆ ಆತ್ತ್. ಸುಮತಿ ಏಡಿರಾಯನು ಶಿವನ ಪಾರ್ವತಿನ ಬೇಡುವೆ. ನಮ್ಮ ಮೇಲೆ ಭಕ್ತಿ ಉಟ್ಟ ಇಲ್ಲೆಂತ ನಿಮ್ಮನ ಪರೀಕ್ಷೆ ಮಾಡ್ದೆ. ಸುಮತಿ ಏಡಿರಾಯನು ನೀವೆ ನಮ್ಮ ತಂದೆ ತಾಯಿ. ನಿಮ್ಮನ ಬಿಟ್ಟರೆ ನಮಗೆ ಯಾರು ಗತಿ ಇಲ್ಲೆಂತ, ಶಿವ ಪಾರ್ವತಿ ಕಾಲಿಗೆ ಅಡ್ಡ ಬಿದ್ದವೆ. ಬಟ್ಲ್ ವಾಪಾಸು ಕೊಟ್ಟವೆ.

ಸುಮತಿನು ಏಡಿರಾಯ ಮೊದಲ್ ಹೆಂಗೆ ಶ್ರೀಮಂತಿಕೆ ಇತ್ತ್ ಹಂಗೆ ಆದೊ. ಚಿಕ್ಕಮ್ಮ ಸುಮತಿನ ಏಡಿರಾಯನ ಬಗ್ಗೆ ಅವಳ ಕಿವಿಗೆ ಸುದ್ದಿ ಸಿಕ್ಕಿತ್. ಒಂದು ದಿನ ಅವಳ ಮನೆಗೆ ಚಿಕ್ಕಮ್ಮ ಬಂದದೆ. ಸುಮತಿಗೆ ಏಡಿರಾಯಂಗೆ ತುಂಬಾ ಸಂತೋಷ ಆತ್. ಲಿಂಗಪ್ಪಂಗು ಗಂಗೆಗು ಅವರ ಮನೆಲಿ ತುಂಬಾ ಬಡತನ ಬಂದುಟ್ಟು. ಅಪ್ಪ ಮತ್ತೆ ಚಿಕ್ಕಮ್ಮನ  ನೋಡಿ ಒಂದು ಬಟ್ಲ್ ತುಂಬಾ ಲಾಡ್ ಉಂಡೆ ತಂದ್ ಇಟ್ಟತ್ತ್. ಅಪ್ಪ ಲಿಂಗಪ್ಪ ಲಾಡ್ ತಿಂತ್. ಬಾರಿ ಲಾಯ್ಕಗಿ ಉಟ್ಟು. ಯಾರ್ ಮಾಡ್ದ್ಂತ ಕೇಳ್ದೊ. ಚಿಕ್ಕಮ್ಮ ಒಂದ್ ಲಾಡ್ ಉಂಡೆ ತಿಂಬಕನ ಅವಳ ಬಾಯಿಗೆ ಕಲ್ಲ್ ಉಂಡೆ ಸಿಕ್ಕಿತ್ತ್. ಸುಮತಿ ಲಾಡ್ ಉಂಡೆನ ಚಿಕ್ಕಮ್ಮನ ಬಾಯಿಗೆ ಕೊಟ್ಟತ್. ಅದ್ ಸಹ ಕಲ್ಲ್ ಉಂಡೆ ಆತ್ತ್. ಯಾರ್ ಲಾಡ್ ಉಂಡೆ ಕೊಟ್ಟರೂ ಅದ್ ಗಂಗೆ ಬಾಯಿಗೆ ಕಲ್ಲ್ ಉಂಡೆ ಆತ್ತಿತ್. ದೊಡ್ಡ ದೇವಸ್ಥಾನಲ್ಲಿ ಬಾರಿ ದೊಡ್ಡ ಪೂಜೆ ಆತ್. ಅಲ್ಲಿ ಪೂಜೆಗೆ ಜನರಿಗೆ ಊಟ ಇತ್ತ್. ಪಾಯಸ, ಅನ್ನ, ಸಾರು, ಪಲ್ಯ, ಮಜ್ಜಿಗೆ ಲಾಡ್ಡ್‌ಗೆ ಲಾಡ್ ಉಂಡೆ ಇತ್. ಲಿಂಗಪ್ಪನು ಗಂಗೆನು ಊಟಕೆ ಕುದ್ದ. ಲಿಂಗಪ್ಪ ಮೊದಲ್ ಲಾಡ್ ಉಂಡೆ ತಿಂತ್ತ್ ಲಾಯ್ಕಾಗಿ ಇತ್. ಗಂಗೆ ಲಾಡ್ ಉಂಡೆ ತಿಂಬಕನ ಅವಳ ಬಾಯಿಗೆ ಕಲ್ಲ್ ಉಂಡೆ ಸಿಕ್ಕಿತ್. ಲಿಂಗಪ್ಪ ಪಾಯಸ ಅನ್ನ ಊಟ ಮಾಡ್ತ್. ಚೆನ್ನಾಗಿ ಇತ್. ಗಂಗೆ ಪಾಯಸ ಅನ್ನ ಊಟ ಮಾಡ್ತ್. ಅವಳ ಬಾಳೆ ಎಲೆಲ್ಲಿ ಅನ್ನ ಎಲ್ಲಾ ಹುಳ ಆಗಿತ್. ಗಂಗೆ ಭಿಕ್ಷೆ ಬೆಡವು ಬಂದರೆ ಉಂಡೆ ಕಲ್ಲ್‌ನ ತಿಂಬಕೆ ಕೊಡ್ತಿತ್ತ್. ಹಂಗೆ ಆಗಿ ಅವಳಿಗೆ ಯಾರು ಲಾಡ್ ಉಂಡೆನ ಕೊಟ್ಟರು ಉಂಡೆ ಕಲ್ಲ್ ಆತ್ತಿತ್. ಬಾಳೆ ಎಲೆಲ್ಲಿ ಅನ್ನ ಕಂಡರೆ ಕಾಲಲ್ಲಿ ಮೆಟ್ಟಿಕಂಡ್ ಹೋಗ್ತಿತ್ತ್. ಹಂಗೆ ಆಗಿ ಅವಳಿಗೆ ಬಾಳೆಲೆಗೆ ಅನ್ನ ಹಾಕಿರೆ

ಹುಳ ಕಾಂಬದು. ಗಂಗೆ ಭಿಕ್ಷರಿಗೆ ಅನ್ನದಾನ ಮಾಡದರ್‌ಂದ ಅವರ ಶಾಪ ದೇವರು ಕೊಟ್ಟ ಪ್ರತಿಫಲ. ಸುಮತಿ ಚಿಕ್ಕಮ್ಮನ ಕರ್ದ್ ಎಲ್ಲಾ ಸಂಗತಿನ ವಿವರಿಸಿದೆ. ಗಂಗೆ ಮಗಳ ಬೇಡಿಕಂಡದೆ. ನಾನ್ ತುಂಬಾ ತಪ್ಪು ಮಾಡ್ದೆಂತ ಹೇಳಿ ದೇವರಿಗೆ ಅಡ್ಡ ಬಿದ್ದದೆ. ಸುಮತಿ ದೇವರ ಬೇಡಿಕಂಡ್ ಚಿಕ್ಕಮ್ಮನ ಬಾಯಿಗೆ ಲಾಡ್ ಉಂಡೆ ಕೊಟ್ಟದೆ. ಉಂಡೆಕಲ್ಲ್ ಹೋಗಿ ಲಾಡ್ ಉಂಡೆ ಆತ್. ಲಾಯ್ಕಾಗಿತ್. ಅನನ ಬಾಳೆಲೆಗೆ ಇಕ್ಕಿತ್ತ್. ಅನ್ನ ಹುಳ ಆತ್ಲೆ. ಲಾಯ್ಕಾಗಿ ಊಟ ಮಾಡ್ತ್. ಸುಮತಿ ಏಡಿರಾಯನು ತುಂಬಾ ಸತ್ಯವಂತರ್. ಏಡಿರಾಯಂಗೆ ಒಬ್ಬ ಮಂಜ ಇತ್. ಅವನ ಹೆಸರ್ ಭೀಷ್ಮ. ಏಡಿರಾಯನ ಸತ್ಯವನ್ನ ಪರೀಕ್ಷೆ ಮಾಡಿಕೆ ಒಂದು ದಿನ ಶಿವ ಬಂದದ್ದೆ ಅಜ್ಜ ರೂಪಲಿ. ಇಂದ್ ಮಗನ ತಲೆ ಕಡ್ದ್ ಮಾಂಸ ಊಟ ಕೊಡಕ್ಕು. ತಲೆ ಕಾಲ್ ಮಾಂಸ ನಂಗೆ ಬೇಡ ಒಳ್ಳೆಯ ಮಾಂಸಖಂಡ ಊಟ ಬೇಕ್ ಅಂತ ಹೇಳಿದ. ಏಡಿರಾಯ ಒಪ್ಪಿಕಂಡದೆ, ಸುಮತಿಗೆ ಸಂಗತಿನ ಹೇಳ್ದೆ. ಸುಮತಿ ಗೋಳಾಡ್ದೆ. ಏಡಿರಾಯ ಶಿವನ ಬೇಡಿಕಂಡದೆ. ಭೀಷ್ಮನ ಕರ್ದ್ ತಲೆನ್ನ ಬಗ್ಗಿಸ್ಸ್ ಅಂತ ಹೇಳ್ತ್. ಒಂದು ಬಾಳ್ ಕತ್ತಿನ ತೆಗ್ದ್ ಭೀಷ್ಮನ ಹತ್ತ್‌ರ ಹೋಕನ ಬಿಸಾಡದೆ. ಇನ್ನೊಂದು ಸಲ ಭೀಷ್ಮನ ಕುತ್ತಿಗೆನ ತುಂಡ್ ಮಾಡ್ತ್. ಒಳ್ಳ ಮಾಂಸಖಂಡನ ಸಾರ್ ಮಾಡಿ ಅಜ್ಜಂಗೆ ಕರ್ದ್ ಬಾಳೆಯೆಲೆಲ್ಲಿ ಊಟ ಕೊಟ್ಟ್‌ತ್. ನಂಗೆ ತುಂಬಾ ಸಂತೋಷ ಆತ್ ಹಂಗೆ ಹೆಳಿ ಮಾಂಸ ಫೀಸ್‌ನ ಮೇಲೆ ಕೊಡಿಗೆ ಹಾಕಿದೆ. ಗುಲಾಬಿ ಹೂವಾಗಿ ಬಿತ್ತ್. ಭೀಷ್ಮ ಅಂತ ಗಟ್ಟಿಯಾಗಿ ಕೂಗಿ ಅಂತ ಅಜ್ಜ ಹೇಳ್ತ್. ಸುಮತಿ ಗೋಳಾಡಿ ಭೀಷ್ಮಾ ಬಾ ಎಂದ್ ಕರ್ತ್. ಆಗ ಎದ್ದ್ ಬಂದ್ ಅಮ್ಮಂತ ತಬ್ಬಿಕಂಡತ್ತ್. ಸುಮತಿನು ಏಡಿರಾಯನು ಸತ್ಯದ ಪಾಠ ತೋರಿಸಿದೊ.

---

**ಕಾಳೆಯಂಡ ತಂಗಮ್ಮ ಅಪ್ಪಚ್ಚ**
ಬಿಳಿಗೇರಿ
ಮೊ : 9483008653




# ನಮ್ಮಮ್ಮನ ಸೀರೆ ಸೆರ್‍ಗ್‌ನ ಪ್ರತಾಪ ಕೇಳ್‌ರೊಪ್ಪೋ - ಕೇಳಿ

**ಕಾವೇರಿಮನೆ ಡಾ. ಬೋಜಪ್ಪ**

ಅಮ್ಮನ ಸೀರೆ ಸೆರ್‍ಗ್‌ನ ಕಂಡವು, ಕೇಳ್ದವು, ಅದರ ಉಪಯೋಗ ಪಡ್ದ್‌ವು ನಮ್ಮ ಕೊಡಗ್‌ಲಿ, ದ.ಕ. ಜಿಲ್ಲೆಲಿ ಯಾರೂ ಬಾಕಿ ಇರ್‍ಕಿಲೆಂತ ನನ್ನ ಅಭಿಪ್ರಾಯ. ಆದ್ರೆ, ಇಂದ್‌ನ್ ಮಕ್ಕಳಿಗೆ ಇದರ ವಿಚಾರನೇ ಗೊತ್ತಿರ್‍ಕಿಲೆ. ಯಾಕೆಂದ್ರೆ, ಈಗ ಸೀರೆ ಉಡುವವೇ ಕಾಂಬದು ಅಪರೂಪ ಆಗಿರ್‍ಕ್‌ನ ಇನ್ನ್ ಅದ್ರ ಸೆರ್‍ಗ್‌ನ ಕಾಂಬದ್ ಎಲ್ಲಿ ಬಂದದೆ ಹೇಳಿ?

ನಿಮ್ಗೆಲ್ಲಾ ಒಂದು ಗಾದೆ ಗೊತ್ತುಟ್ಟಾ. An idle mind is Devil's Palaceಂತ. ನಂಗೆ ಈಗ 93 ವರ್ಷ. ನನ್ನ ಮೆದ್‌ಳ್ ಸುಮ್ಮನಿರ್‍ಕೆ ಬುಟ್ಟರೆ ಎಲ್ಲಿಯಾರ್ 'ಡೆವಿಲ್' (ಭೂತ) ಬಂದ್ ಕುದ್ದ್‌ಕಂಬದುಂತೇಳಿ, ನಮ್ಮ ಹಿಂಗಾರಕೆ ಏನಾರ್ ಬರೆಯಕುಂತೇಳಿ ಈ ಒಂದು ಸಂಣ ಹಾಸ್ಯ ಚುಟಿಕೆನ ಇಲ್ಲಿ ಬರ್‍ದೊಳೆ ಅಷ್ಟೆ.

ಈ ಪ್ರಪಂಚಲಿ, ಎಲ್ಲಿ ನೋಡಿರೂ, ಕಷ್ಟ-ನಷ್ಟ-ಸಂಕಟ', ಎಲ್ಲೆಲ್ಲೂ ಬೇನೆ-ಗೀನೆ ಇದೇ ಗೋಳು. ಹಿಂಗಿರ್‌ಕಾಕನ, ಅವು ನೆಗಾಡುದೇ ಕಾಂಬದ್‌ಲೆ. ಆದ್ರೆ ನಮ್ಮ ಹಿಂಗಾರನ ಓದುವವರನ್ನಾರ್ ಹಂಜ ನೆಗಾಡ್ಸ್‌ಕೂಂತ ನನ್ನ ಆಸೆ. ನೀವೆಲ್ಲಾ ಇದ್ನ ಓದಿ ನೆಗೆ ಬಂದ್ರೆ ಬಿದ್ದ್-ಬಿದ್ದ್ ನೆಗಾಡಿಬಿಡಿ. ಅಲ್ಲ, ಸಿಟ್ಟ್ ಬಂದ್ರೆ, ಹಿಟ್ಟ್ ತಿಂದ್ ನನ್ನ ಬೆನ್ನಿಗೆ ಎರಡ್ ಗುದ್ದಿ ಮಲ್ಗಿ ಬುಡಿ ಆತಾ? ಹಂಗಾದ್ರೆ ನನ್ನ ಚುಟುಕುನ ಈಗ ಓದಿ:

1. ಹೆತ್ತ ಕೂಸು ಅತ್ತರೆ ಅದ್ರ ಕಣ್ಣೀರ್ ಒರ್‍ಸಿಕೆ ಬೇಕೇ-ಬೇಕ್-ಅಮ್ಮನ ಸೀರೆ ಸೆರಗ್

2. ಕೂಸಿಗೆ ಶೀತ ಆಗಿ ಗೊಣ್ಣೆ ಬಂದ್ರೆ, ಅದ್ನ ತೆಗಿಯಕೆ ಬೇಕೇ-ಬೇಕ್-ಅಮ್ಮನ ಸೀರೆ ಸೆರಗ್

3. ಜರ ಬಂದ್ ಮದ್ದ್ ಕುಡ್ಸಿರೆ, ವಾಂತಿ ಮಾಡ್ಕನ ಅದ್ನ ಕಟ್ಟಿಕಂಬಕೂ ಬೇಕೇ-ಬೇಕ್-ಅಮ್ಮನ ಸೀರೆ ಸೆರಗ್

4. ಕೂಸಿಗೆ ಸೆಕೆಯಾದ್ರೆನೂ, ಚಳಿ ಆದ್ರೆನೂ, ಬೇಕೇ-ಬೇಕ್-ಅಮ್ಮನ

ಸೀರೆ ಸೆರಗ್

5. ಮಕ್ಕ ಬಿಸ್ಲಿಲಿ ಆಟ ಆಡಿ ಬೆವರ್ ಬಂದರೆ ಒರ್ಸಿಕೆ ಬೇಕೇ–ಬೇಕ್–ಅಮ್ಮನ ಸೀರೆ ಸೆರಗ್

6. ಕೂಸ್ ಮೆಲ್ಲೆ – ಮೆಲ್ಲೆ ನಡಿಯಕೆ ಸುರುಮಾಡ್ಕನ ಅದ್ರ ಕೈಗೂ ಬೇಕೇ–ಬೇಕ್–ಅಮ್ಮನ ಸೀರೆ ಸೆರಗ್

7. ತೋಟ–ತೊಡಿಗೆ ಎಲ್ಲಾ ಸುತ್ತಾಡಿಕಂಡ್ ಬಾಕೆನೂ ಬೇಕ್ ಆ ಕೂಸಿಗೆ ಅಮ್ಮನ ಸೀರೆ ಸೆರಗ್

8. ಹೊಸಬರ್ ಯಾರಾದರ್ ಬಂದ್ರೆ ನಾಚಿಕೆಲಿ ಕೂಸ್ ಅದ್ರ ಮಖ ಮುಚ್ಚಿಕಂಬಕೂ ಬೇಕ್–ಅಮ್ಮನ ಸೀರೆ ಸೆರಗ್

9. ಕೆಟ್ಟ ಬಾಯಿ ಜನ ಯಾರಾದರ್ ಬಂದ್ ನಿಮ್ಮ ಕೂಸ್ ಎಷ್ಟ್ ಲಾಯ್ಕ ಉಟ್ಟುಂತೇಳ್ರೆ ತಟ್ಟನೆ ಕೂಸ್‌ನ ಮುಖ ಮುಚ್ಚಿಕುಂಬಕೆ ಬೇಕೇ–ಬೇಕ್–ಅಮ್ಮನ ಸೀರೆ ಸೆರಗ್

10. ದೊಡ್ಡ ಮಕ್ಕಳ ರಂಪ ತಡೆಕಾಗದೆ ಸಂಣ ಕೂಸಿಗೆ ತಂದ ಪೆಪ್ಪಿನ ಅಡ್ಗಿಸಿ ಕಂಬಕೂ ಕೂಡ ಬೇಕೇ–ಬೇಕ್–ಅಮ್ಮನ ಸೀರೆ ಸೆರಗ್

11. ದಿಡೀರ್ ನೆಂಟ್ರ್ ಮನೆಗೆ ಬಂದ್ರೆ ಓಡಿಹೋಗಿ ಅವು ಕೂರ್ವ ಕುರ್ಚಿ, ಬೆಂಚ್ ಎಲ್ಲಾ ಒರ್ಸಿಕೇ ಬೇಕೇ–ಬೇಕ್–ಅಮ್ಮನ ಸೀರೆ ಸೆರಗ್

12. ದೇವ್ರ ಪೂಜೆಗೆ ಎಂದೆರ್ಡ್ ಹೂ ಕೊಯ್ದರೆ ಅದರ್‌ನ ಹಾಕಂಬಕೂ ಬೇಕೇ–ಬೇಕ್–ಅಮ್ಮನ ಸೀರೆ ಸೆರಗ್

13. ಹತ್ರದ ಅಂಗ್ಡಿಗೆ ಹೋಕನ ಬ್ಯಾಗ್ ಮರ್‌ತ್‌ಹೋದ್ರೆ ಆಗನೂ ಸ್ವಲ್ಪ ಸಾಮಾನಾದ್ರೂ ಕಟ್ಟಿಕಂಬಕೆ ಬೇಕೇ–ಬೇಕ್–ಅಮ್ಮನ ಸೀರೆ ಸೆರಗ್

14. ರಸ್ತೆ ಗಾಡಿಯಂವ ಬಂದ್ ಬಾಯಿ ಬಡ್ಕಂಡ್ರೆ, ಬ್ಯಾಗ್ ಮರ್ತ್ ಓಡಿಹೋಗಿ ಒಂದಿಷ್ಟ್ ಹಂಣ್–ತರಕಾರಿನೂ ತುಂಬ್ಸಿಕೆನೂ ಬೇಕೇ–ಬೇಕ್–ಅಮ್ಮನ ಸೀರೆ ಸೆರಗ್

15. ಮಂಗಳ ಕಾರ್ಯಕ್ರಮಗಳ್ಲಿ ಉಡಿಯಕ್ಕಿ, ಭಾಗಣಗಂಟ್ ಕಟ್ಟಿಕಂಬಕೆ ಬೇರೆ ಎಲ್ಲದಕ್ಕಿಂತಲೂ ಶ್ರೇಷ್ಠವಾದದ್ದೇ ಅಮ್ಮನ ಸೀರೆ ಸೆರಗ್

16. ದೇವಸ್ಥಾನಕ್ಕೆ ಹೋಗಿ ಪೂಜೆ ಮಾಡ್ಸಿರೆ ಅಲ್ಲಿ ಬ್ಯಾಗೆಲಿಟ್ಟು. ಆಗ ಬೇಕೇ–ಬೇಕ್–ಅಮ್ಮನ ಸೀರೆ ಸೆರಗ್

17. ಅಮ್ಮಂಗೆ ಯಾರಾದರ್ ಬೈದ್ ಜಳಗಕೆ ಬಂದ್ರೆ ನಿನ್ನ ಮುಗ್ಸಿ ಬುಟ್ಟನೆಂತೇಳಿ ಸೀರೆ ಸೆರ್ಗ್‌ನ ಸೊಂಟಕ್ಕೆ ಗಟ್ಟಿಯಾಗಿ ಬಿಗ್‌ದ ಮುಂದೆ

ಬಾಕೆ ಬೇಕಾದ ಅಮ್ಮನ ಕೋವಿ ಎಂದ್ರೆ ಅದೇ ಅಮ್ಮನ ಸೀರೆ ಸೆರಗ್

18. ಅಪ್ಪನ ಮೇಲೆ (ಗಂಡನ ಮೇಲೆ) ಸಿಟ್ಟ್ ಬಂದ್ರೆ ಪಟ್ಟ್‌ಂತ ಸೀರೆ ಸೆರ್‌ಗ್ನ ಬಿಗ್‌ದ್ ಸೊಂಟಕೆ ಕೈ ಇಟ್ಟಾರೆ ಅಪ್ಪ ಪರಾರಿ. ಈ ಜಬರ್‌ದಸ್ತಿಗೂ ಬೇಕೇ–ಬೇಕ್–ಅಮ್ಮನ ಸೀರೆ ಸೆರಗ್

19. ಭಿಕ್ಷೆ ಬೇಡವು ಮನೆಗೆ ಬಂದ್ ಗೋಗರ್ದರೆ ಒಂದಿಷ್ಟ್ ಅಕ್ಕಿ ತುಂಬ್ಸಿಕಂಡ್ ಓಡಿಹೋಗಿ ಅವಂಗೆ ಬಿಕ್ಷೆ ಹಾಕಿಕೂ ಬೇಕೇ–ಬೇಕ್–ಅಮ್ಮನ ಸೀರೆ ಸೆರಗ್

20. ಕೋಳಿ ಪಿಳ್ಳೇಗ ಬಂದ್ ಅಮ್ಮನ ಕಾಲ್ನ್ ಕುಡ್ಕಿರೆ ಒಂದಿಷ್ಟ್ ನುಚ್ಚೆ ಹಾಕಿಕಂಡ್ ಓಡಿ ಹೋಕೆನೂ ಬೇಕೇ–ಬೇಕ್–ಅಮ್ಮನ ಸೀರೆ ಸೆರಗ್

* ಅಯ್ಯೋ ಶಿವನೆ, ಅಮ್ಮನ ಸೀರೆ ಸೆರ್‌ಗ್ನ ಪ್ರತಾಪ ಮತ್ತೆಷ್ಟ್ ಉಟ್ಟೋ ಆ ದೇವ್ರಿಗೇ ಗೊತ್ತಪ್ಪ.

* ಗ್ಯಾನ ಮಾಡಿ – ಮಾಡಿ ಇಷ್ಟ್ ಬರ್‌ದ್ದೊಳೆ. ನಂಗೆ ಸಾಕಾಗಿ ಹೋತ್. ಇನ್ನ್ ಏನಾರ್ ಇದ್ರೆ, ನೀವೆ ಬರ್ಕಣಿ ಆತಾ?

** ಕಡೇದಾಗಿ ನನ್ನ ಬೇನೆ ಏನ್‌ಂತೇಳ್ರೆ, ಇಂಥ ಸೀರೆ ಸೆರ್‌ಗ್ನ ಭಾಗ್ಯ ಈಗ ನಮ್ಮ ಮಕ್ಕಳೀಗೆಲ್ಲಿಟ್ಟು? ಯಾಕೆಂದ್ರೆ ಹಿಂದಿನ ಕಾಲದಾಂಗೆ ಇಂದ್ ನಮ್ಮ ಮಹಿಳಾಮಣಿಗ ಸೀರೆ ಉಡುದೇ ಅಪರೂಪ ಆಗಿ ಹೋಗುಟ್ಟು. ಅಂದ ಕಾಲಲಿ ನೋಡಿರ್‌ಏರಿ ನೀವೆಲ್ಲಾ. ಒಂದ್ ಮದುವೆ–ಮಂಜಿ, ಅಲ್ಲ ಏನೇ ಸಮಾರಂಭ ಇದ್ರೆ ಅವೆಲ್ಲಾ ಪಿಳಿ–ಪಿಳಿ–ಕಳ–ಕಳದ ಭರ್ಜರಿ ಸೀರೆಗಳ್ನ ಉಟ್ಟ್‌ಕಂಡ್, ಕುತ್ತಿಗೆಗೆ ಜೋಮಾಲೆ, ಕೊಕ್ಕೆತಾತಿ ಹಾಕಂಡ್ ಸಾಲ್–ಸಾಲಾಗಿ ಮದ್ವೆಲಿ ಹಣ ಕಟ್ಟಿಕೆ ನಿಂತ್ರೆ ಅವರ್ನ ನೋಡಿಕೆ ಗಂಡಸರಿಗೆ ಹತ್ತ್ ಕಣ್ಣೇ ಬೇಕ್‌ಂತೇಳ್ರೆ ನೀವ್ ನೆಗಾಡಿ ಬಡಿ. ನಾನ್ ಸತ್ಯನೇ ಬರ್‌ದ್ದೊಳೆ. ನಾನ್ ಕೂಡ ಒಮ್ಮೊಮ್ಮೆ ನೋಡಿಯೊಳೆ (ಈಗಲ್ಲ–ಆಗ).

ಆದ್ರೆ, ಈಗೆಲ್ಲಿಟ್ಟು ಇಂಥ ಸೀರೆ ಪೆರೇಡ್? ಕಣ್ಣಿಗೆ ಕಪ್ಪು ಕನ್ನಡ್ಕ ಹಾಕಂಡ್ ಎಲ್ಲಿ ಹುಡ್ಕಿ–ಹುಡ್ಕಿ ಓರೆ ಕಣ್ಣ್‌ಲಿ ನೋಡ್ರೂ ಕೂಡ ಕಾಂಬದ್ ಬರೀ ಸೆಲ್ವಾರ್–ಕಮ್ಮೀಸ್, ಮತ್ತೆ ಅಲ್ಲಿ–ಇಲ್ಲಿ ಸೀರೆ ಉಟ್ಟವು. ಗೂಡೆಗಂತು ಚಡ್ಡಿಗೆ ಮಾರ್‌ಹೋಗಿ ಬುಟ್ಟೊಳೊ. ಈ ಪ್ರಪಂಚ ನವಯುಗದ ಮಹಿಳೆಯರೂ, ಮಾನ್ಯರೂ, ಯುವಕ–ಯುವತಿಯರೂ ಹಾಕಿಕೊಂಬ ಉಡಿಗೆ–ತೊಡ್ಗೆನ ನಂಗೆ ವರ್ಣಿಸಿಕೆ ಸಾಧ್ಯನೇ ಇಲ್ಲೆ. ಕ್ಷಮಿಸಿ: ಅದರ್ನೆಲ್ಲಾ ನೀವೇ ವರ್ಣಿಸಿ ಕಣಿ, ಹಂಗೆನೇ ನೋಡಿ ಕುಸಿ ಪಟ್ಟ್‌ಕಣ್ಣಿ, ಇಲ್ಲರೆ

ಕಣ್ಣೀರ್ ವರ್ಸಿಕಣಿ ಆತಾ? ನಿಮ್ಗೆ ಇನ್ನೂ ಹೆಚ್ಚಿನ ವಿಶೇಷಗ ಬೇಕಾದ್ರೆ ಜನವರಿ–ಮಾರ್ಚ್ 2022ನ ಹಿಂಗಾರಲಿ (ಪೇಜ್ 18–20) ಕಡ್ಯದ ಶ್ರೀಮತಿ ಪಾರ್ವತಿ ಕೃಷ್ಣಪ್ಪನವು ಇದರ್ನೆಲ್ಲಾ ಲಾಯ್ಕ್‌ಲಿ ಬರ್‍ದೊಳೊ. ಅವರ್ನೇ ಕೇಳಿ ಸಮಾದಾನ ಪಟ್ಟ್‌ಕಣಿ, ಮರಿಬಡಿ. ಈಗಾಗಲೇ ನಿಮ್ಮಲ್ಲಿ ಕೆಲವರಾದ್ರೂ ಇರ್‍ನ ಓದ್ರಿರಿಕೂ ಸಾಕ್.

ಕಡೇದಾಗಿ – ಅದೇನಿದ್ರೂ ಭಾರತದ ಮಹಿಳೆಯರ ಲಕ್ಷಣ ಅಂದ–ಚಂದ. ಅವು ಉಟ್ಟುಕೊಳ್ವ ಸೀರೆಲಿ ಅಡ್ಗಿ ಕಂಡ್‌ಟ್ಟಾಂತ ಪರದೇಶದವೂ ಕೂಡ ಹೊಗಳಿರ್‌ಕಾಕನ ನಿಮ್ಮ ಹಿಂದಿನ ಅಮ್ಮಗಳಾಂಗೆ ಇಂದಿನ ನಮ್ಮ ಮಹಿಳೆಯರೂ ಚೆಂದವಾದ ಸೀರೆಗಳ ಉಟ್ಟುಕೊಂಡ್ ಕುಸಿ–ಕಸಿ, ಥಳ–ಥಳ ಜೀವ್ನ ಕಂಡ್‌ಕೊಳ್ಳಿ. ಯಾವ ಕಾರ್ಣಕ್ಕೂ ಅಮ್ಮನ ಅಂಥ ಸೀರೆನ ಬುಟ್ಟ್ ಹಾಕ್ ಬಡಿ ಎಂಬುದೇ ಈ ವಯಸ್ಕನ ಸಂಣ ಕಿವಿಮಾತ್. ಹಂಗೆನೇ ಆಸೆ. ಆ ಸೀರೆಯೇ ನಿಮ್ಗೆ ಅಂದ–ಚಂದ, ಅದೇ ನಿಮ್ಮ ಘನತೆ, ಅದೇ ನಿಮ್ಮ ಗಂಭೀರತೆ.

ನಿಮ್ಮೆಲ್ಲರ ದೊಡ್ಡಂಣ

**ಕಾವೇರಿಮನೆ ಡಾ। ಬೋಜಪ್ಪ**

(ನಿವೃತ) ತೋಟಗಾರಿಕೆ ತಜ್ಞ (ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು)

Res. : # 38, 7th Cross, HMT L.O.R.T. Nagara, B-32

Mobile : 9738450971



ಪುರಾಣ ಕತಾಜೊಂಪೆ

# ಇತಿಹಾಸದ ಬೆಳಕ್‌ಲಿ ಕೊಡಗ್‌ನ ಕಾವೇರಿ

- ಎಂ.ವಿ. ಮೋಹನ್

ಕೊಡಗ್‌ಲಿ ಬ್ರಹ್ಮಗಿರಿ ಶ್ರೇಣಿ ಸುಮಾರು 1341 ಮೀಟರ್ ಎತ್ತರಲಿ ಚಿಮ್ಮಿಕಂಡ್ ಇರ್ವ ತಲಕಾವೇರಿಯ ಒಂದು ನೆಲೆ ಉಟ್ಟು. ಪೌರಾಣಿಕ ಹಿನ್ನಲೆಲಿ ಈ ನೆಲೆಗೆ ಬ್ರಹ್ಮಕುಂಡಿಕೆ, ಕಾವೇರಿ ಕುಂಡಿಕೆ ತೇಳ್ವ ಹೆಸರು ಬಂದುಟು. ಶಾಸನಲಿ 'ಮೊದಲ್ನಾವೇರಿ' ತೇಳಿ ತಲಕಾವೇರಿಗೆ ಉಲ್ಲೇಖಿಸಿದು ಉಟ್ಟು. ಭೂ ವಿಜ್ಞಾನದ ರೀತಿಲಿ ಕೋಟಿ ಕೋಟಿ ವರ್ಸಗಳ ಭೂ ಇತಿಹಾಸ ಈ ದಕ್ಷಿಣ ಭಾರತದ ಭೂಮಿಗೆ ಉಟ್ಟು. ನಿರಂತರ ಆಗಿ ಈ ಹಿನ್ನಲೆಲಿ ಚಿಮ್ಮಿಕಂಡ್ ಬರ್‍ತಾ ಇದ್ದ ಈ ಕಾವೇರಿ ನದಿ ಮೊನ್ಸರ ಕಣ್ಣಿಗೆ ಕನಿಷ್ಠ 3 ಸಾವಿರ ವರ್ಸಗಳ ಹಿಂದೇನೇ ಬಿದ್ದುಟು. ಏಕೆ ತೇಳ್ರೆ ಕುಂಭ ಸಂಭವ ಅಗಸ್ತ್ಯಮುನಿ ಆರ್ಯ ಸೋದರರಿಂದ ಬಹಿಷ್ಕೃತ ಆಗಿ ದ್ರಾವಿಡ ಪೂರ್ವ ಬುಡಕಟ್ಟುಗಳ ವಂಶಿಕರ ಜತೆ ದಕ್ಷಿಣ ಭಾರತದ ಷಶ್ಚಿಮ ಘಟ್ಟಗಳ ಕಡೆಗೆ ಕ್ರಿ.ಪೂ 1075ರ ಕಾಲಲಿ ಬಂದುಟುತ ಹೇಳ್ವೆ. ಒಂದು ಕಾಲಲಿ ಉತ್ತರ ಭಾರತವೆಲ್ಲಾ ಸಮುದ್ರದಂಗೆ ಇತ್. ಆಗ ಭಾರತದ ದಕ್ಷಿಣ ಭಾಗ ಮಾತ್ರ

ಇದ್ದದ್ದೆ ಮತ್ತೆ ಉತ್ತರಕ್ಕೆ ಚಲಿಸಿಬುಟ್ಟು ಏಷ್ಯಾಖಂಡಕ್ಕೆ ಡಿಕ್ಕಿ ಹೊಡೆದು ಬುಟ್ಟಿತು. ಅದರಿಂದಾಗಿ ಟಿಬೆಟ್ ಪ್ರಸ್ಥಭೂಮಿ ಮತ್ತೆ ಹಿಮಾಲಯ ಪರ್ವತ ಪಂಕ್ತಿಗಳೆಲ್ಲಾ ಹುಟ್ಟಿಕಂಡೊ. ಈ ಪರ್ವತ ಶ್ರೇಣಿಗಳ ಅನೇಕ ಶಿಖರಗಳ್ಲಿ ಆನೆ, ಖಡ್ಗ ಮೃಗಗಳ ಪಳೆಯುಳಿಕೆಗೆ ಕಂಡು ಬಂದವೆ. ಅಂದರೆ ಭೂ ಬದಲಾವಣೆಯ ಸಂದರ್ಭಲಿ ಅದಕ್ಕಿಂತ ಮೊದ್ಲು ಹಿಮಾಲಯ ಆರಂಭದ ದೆಸೆಲಿ ಅದು ಸಮತಟ್ಟು ಪ್ರದೇಶ ಆಗಿತ್ ಗಡ. ಇದೆಲ್ಲಾ ಬದಲಾಕೆ ಸುಮಾರು ಲಕ್ಷ-ಲಕ್ಷ ವರ್ಷನೇ ಹಿಡ್‌ದುಟ್ಟು. ಈ ಹಿನ್ನಲೇಲಿ ಅಗಸ್ತ್ಯನ ಸಮುದ್ರಾ ಪೋಶನ ಕತೆ, ಲೋಪಾ ಮುದ್ರೆ-ಕಾವೇರಿನ ಮೊದ್ವೆ-ಅದ ಕತೆ, ಹಿಂಗೆ ಬೇರೆ ಬೇರೆ ರೋಚಕ ಸಂಗತಿಗೆ ಅಗಸ್ತ್ಯನ ಹೆಸರಿನವು. ಅಗಸ್ತ್ಯನ ಪಂಥವಿದ್ದ ಬಗ್ಗೆ ಸೂಚನೆ ಸಿಕ್ಕಿದೆ.

ಲೋಪಾ ಮುದ್ರೆ ಮತ್ತೆ ಕಾವೇರಿ ತೇಳ್ವ ಜೋಡಿ ಹೆಸರ್‌ನ ಸ್ತ್ರೀನ ಜಲರೂಪಲಿ ನದಿದೇವತೆಯಂಗೆ ಕಂಡು ಕಾವೇರಿ ಸುರೂಲಿ 2 ಕವಲಾಗಿ ಹರಿದುಕಂಡಿದ್ದ ಹಂಗೆ ಕಂಡದೆ, ಕವೇರ ಮುನಿ ಸಂತಾನಪ್ರಾಪ್ತಿಗಾಗಿ ಪ್ರಾರ್ಥಿಸುತ್ತ ಇದ್ದದೆ. ಆಗ ಲೋಪಾಮುದ್ರೆ-ಕಾವೇರಿ ಕನ್ನಿಕೆಗೆ ಬ್ರಹ್ಮನಿಂದ ದತ್ತು ಮಗಳಾಗಿ ಪಡೆಯಕೆ ದೇವವಾಣಿ ಹೇಳ್‌ದಂಗೆ ಈ ಕಾವೇರಿನ ಮೊದ್ವೆ ಆಗಿ ಜಲರೂಪಲಿ ಅಗಸ್ತ್ಯಮುನಿ ಕಮಂಡಲುಲಿ ಬಂಧಿಯಾದ ಸಮಯಲಿ ಅದನ್ನ ಕಾಗೆ ಬಂದು ಉರುಳಿಸಿಕಾಕನ ಅದು ಕಾಂತಮನ್ ರಾಜ್ಯಲಿ ಕಾವೇರಿ ಹರ್ದು ಬರ ಇಂಗಿಸಿದ್. ಈ ಕತೆ ಸಾಂಕೇತಿಕ ಆಗಿ ಕಾವೇರಿ ಚಿಮ್ಮುದು ಮತ್ತೆ ಕೊಡಗ್‌ನ ಬೆಟ್ಟಂದ ರಭಸಲಿ ಹರ್ದು ಬರುವ ಸಂಗತಿನ ಸೂಚಿಸಿದೆ. ಭೂ ವಿಜ್ಞಾನದ ರೀತಿಲಿ ಇದು ಒಂದು ಸಹಜವೇ ಸರೀತ ನಂಗೆ ಕಂಡದೆ. ತಮಿಳುನಾಡುಲಿ ಸಾಧಾರಣ ಆಗಸ್ಟ್ ತಿಂಗಳ್ಲಿ 18ನೇ ತೀರ್ಥೋದ್ಭವ ಹಬ್ಬ ನಡ್‌ದದೆ.

ಮತ್ತೆ ಕೊಡಗ್‌ಲಿ ಸಾಧಾರಣ ಅಕ್ಟೋಬರ್ ತಿಂಗಳ 17-18ನೇ ದಿನಲಿ ತುಲಾಸಂಕ್ರಮಣ ತೀರ್ಥೋದ್ಭವಸ ಒಂದು ರೀತಿಲಿ ಪೌರಾಣಿಕ ಸಂಬಂಧನ ಸೂಚಿಸಿದೆ. ಜತೆಗೆ ಇತಿಹಾಸದ ಎಳೆಗಳನ್ನ ಪರಸ್ಪರ ನೇಯ್ದುಕಂಡಂಗೆ ಕಂಡದೆ. ಲಕ್ಷಾಂತರ ವರ್ಸಗಳ ಹಿಂದೆ ಭೂ ವೈಜ್ಞಾನಿಕ ಬದಲಾವಣೆಗಳಂದಾಗಿ ಕಾವೇರಿ ಹರಿದುಕಂಡ್ ಇದ್ದ ಪಥದಲ್ಲಿಸ ಬದಲಾವಣೆ ಆಗುಟು. ಕನಿಷ್ಠ 3 ಸಾವಿರ ವರ್ಸಗಳ ಹಿಂದೆ ಕಾವೇರಿಗೆ ಒಂದು ಪೌರಣಿಕ ಮಹತ್ವ ತರುವ. ಸಂದರ್ಭ ಒದಗಿತ್ ತೇಳ್ದು ಸ್ಪಷ್ಟ ಆಗುಟು. ಆದ್ರೆ ಕಾವೇರಿಗಿದ್ದ ಸುರೂನ ಹೆಸ್ರೂ ಗೊತ್ಲೆ. ತಮಿಳುನಾಡು ಮತ್ತೆ ಕರ್ನಾಟಕದ ಇತಿಹಾಸಲಿ ಚೆಲುವೆ ಆಗಿ ಅವಳ ಹೆಸ್ರು ಪವಿತ್ರ ಆಗಿ ಉಟ್ಟು.

ಸಂಗಮ ಯುಗದ ಚೋಳರ್ ಕ್ರಿ.ಶ. 2ನೇ ಶತಮಾನಲಿ ಅಭಿವೃದ್ಧಿ ಹೊಂದಿದೊ. ಆಗ ಕಾವೇರಿಯ ಸಾಗರ ಸಂಗಮದ ನೆಲೆಯ ಹತ್ರ 'ಕಾವೇರಿ ಪೂಂಪಟ್ಟಣಂ' ತೇಳ್ವ ರಾಜಧಾನಿನ ಕಟ್ಸಿ ಅಳ್ವಿಕೆ ನಡೆಸಿದೊ. ದಶಕುಮಾರನ ಚರಿತ್ರೆನ ಸಿ.ಬಿ ಜನಾಂಗದ ಇತಿಹಾಸನ ಕಾವೇರಿ ತೀರದ ಚೋಳರ ವಂಶದವರ ಜೊತೇಲಿ ಗುರುತಿಸುದು ಉಟ್ಟು. ಸಿ.ಬಿ.ಗಳನ್ನ ಮಾಕ್ಲ್ಯ ದೇಶದವು ತೇಳುದು ಉಟ್ಟು, ಕೊಡಗ್‌ಗೆ ಮತ್ಸ್ಯ ದೇಶ ತೇಳಿ ಹೆಸ್ರು ಬಾಕೆ ಕಾರಣ ಕೇಳ್ರೆ. ಗಂಗಾ ನದಿ ತೀರದಲ್ಲಿದ್ದ ಸಿ.ಬಿ. ಜನಾಂಗದ ಶಾಖೆ ಬಂದ್ ಕೊಡಗ್‌ಗೆ ಬಂದುಟು ತೇಳಿ ಹೇಳ್ವೆ. 'ಮಹಾಭಾರತಲಿ ಸ ಸಿ.ಬಿ. ದೇಶನ ಗಂಗಾ ತೀರಲಿ ಗುರುತಿಸುದು ಉಟ್ಟು' ಹಿಂಗೆ ಕಾವೇರಿ ಮತ್ತೆ ಗಂಗೆಗೆ ಸ್ಕಾಂದಪುರಾಣಲಿ ನಂಟು ತರುವಲ್ಲಿ ಸಿ.ಬಿ.ಯವು ಕಾರಣತ ಕಂಡದೆ.

ಕರ್ನಾಟಕದ ಕ್ರಿ.ಶ. 550ರ ಬಾದಾಮಿ ಚಾಲುಕ್ಯರ ಯಳಂದೂರು ಶಾಸನಲಿ ಸಾಮ್ರಾಜ್ಯ ವರ್ಣನೆಲಿ 'ಕಾವೇರಿ ಕಬಿನಿ ನದೀಬರಲಂಕ್ನತಸ್ಯ' ತೇಳ್ವ. ಅಂದರೆ ಕಾವೇರಿ ಕಬಿನಿ ನದಿಗಳುಂದ ಚಾಲುಕ್ಯ ಸಾಮ್ರಾಜ್ಯ ಅಲಂಕಾರ ಆಕ್‌ತೇಳಿ ಹೇಳ್ವೆ. ಕ್ರಿ.ಶ. 674 ಚಾಲುಕ್ಯರ ವಿಕ್ರಮಾದಿತ್ಯನ ಸವಣೂರು ಶಾಸನ ಕಾವೇರಿನ ಉಲ್ಲೇಖಿಸಿದೆ. ಕ್ರಿ.ಶ 1001 ಮಡಿಕೇರಿ ಶಾಸನಲಿ ಸುರೂಗೆ 'ಕಾವೇರಿ'ಯ ಉಲ್ಲೇಖ ಕಂಡುಬಂದದೆ. 'ಮೊದಲ್ಕಾವೇರಿಯಂ ಮೀನ್ನು ರಾಮೇಶ್ವರ ಮರ್ಚಿ' ತೇಳ್ವೆ. ಅಂದರೆ ತಲಕಾವೇರಿಗೆ 'ಮುಂಚೆ ಕಾವೇರಿ' ತೇಳ್ವ ಹೆಸ್ರು ಆಗ ಪ್ರಚಲಿತದಲ್ಲಿತ್ತು. ಆದರೆ ಸ್ಕಾಂದ ಪುರಾಣದ ಕತೆ 'ಶಿಲಪ್ಪದಿಕಾರಂ'ನ ಹಿನ್ನೆಲೆಲಿ ಆ ಕಾಲಕ್ಕೆ ಪ್ರಚಲಿತದಲ್ಲಿತ್ತು ಹೇಳ್ವೆ.

ಸಂಗಂ ಸಾಹಿತ್ಯಲಿ 'ಕವೇರ ಪುತ್ರಿ ಕಾವೇರಿ'ತೇಳಿ ಇತ್ತ್ ಗಡ. 11ನೇ ಶತಮಾನಲಿ ಕೊಡಗ್‌ಲಿ ಕವೇರ ಮಗಳ ಕತೆ ಸ್ಕಾಂದ ಪುರಾಣಲಿ ಇದ್ದದು ಗೊತ್ತಿತ್. ಕ್ರಿ.ಶ. 1398ರ ಅಭಿನವ ಮಂಗರಾಜನ ನಿಘಂಟ್‌ಲಿ "ಕೊಡವ ಕೊಡಗರ್ ಮೃಗಲಬ್ಧಕಂ ವ್ಯಾಧನಕುಂ" ತೇಳ್ವ ಸಾಲ್‌ನ ಸೂಚನೆ ಇತ್ತ್‌ಗಡ. ಹಿಂಗೆ ಇರುಕಾಕನ ಮೂಲ ನಿವಾಸಿ ಕೊಡಗ್‌ನವರಲ್ಲಿ ಹಂಗೆ ಕೊಡವರು ವೊಳೊತ ಗೊತ್ತಾತ್. ಕೊಡವರ್ ಕದಂಬ ವಂಶೀಕರು ತೇಳಿ ಹೇಳ್ವೆ ಕೊಡವರು. ಕ್ಷಾತ್ರ ಕುಲದ ಸಂಕೇತ ತೇಳಿ ಹೇಳ್ವೆ. 11ನೇ ಶತಮಾನಲಿ ಕೊಡಗ್ ಕೇರಳ ವೈನಾಡ್ ಸಹಿತ ತೆಂಕಣಾವಿ ಮುಟ್ಟಿ ವಿಸ್ತಾರ ಪಡುದುಟ್ಟು. ಕ್ರಿ.ಶ 1079ರಲ್ಲಿ ಹೆಗ್ಗಡದೇವನ ಕೋಟೆ ತಾಲ್ಲೂಕು ಕಿತ್ತೂರು ಶಾಸನಲಿ ಕದಂಬ ಕಂಠೀರವ, ಬನವಾಸಿ, ವಿಷಯಾಧೀಶ್ವರ ಮಹೇಶ್ವರ ಭಕ್ತಂ, ಶ್ರೀ ಮನ್ಮಹಾಮಂಡಳೇಶ್ವರ... ಬೀರ ಬಯಲ್ನಾಡನಾಡೆ ಇವ್ರು

ರವಿ(ವ)ರ್ವ್ಯಂ ಬಯಲ್ನಾಡಯ್ದು ಮುನ್ನೂರು ಮನೇಕಾ ರಾಜ್ಯಗೈಯುತ್ತಿರೆ ತೇಳುವಲ್ಲಿಯ ಶಾಸನೋಕ್ತ ರವಿವರ್ಮ ಕದಂಬ ವಂಶಜ ತೇಳ್ವ ಹಾನುಗಲ್ಲು ಕದಂಬ ವಂಶದವತ ಹೇಳ್ವೆ. ಇದೂ ಅಲ್ಲದೆ ಕೊಡಗ್‌ನ ಕ್ರಿ.ಶ 1095 ಯಡೂರು ಶಾಸನಲಿ ದುದ್ದರಸ ತೇಳ್ವ ಒಬ್ಬ ಹಾಸುಗಲ್ಲು ಕದಂಬ ವಂಶದವನಾಗಿತ್ತು ಗಡ. ಅಂದರೆ ಈ ಕದಂಬ ವಂಶದವು ತೆಂಕಣಾಂಬಿಂದ ಕೊಡಗ್‌ನ ಉತ್ತರ ಭಾಗದ ಮುಟ್ಟಿ ಪ್ರಭಾವ. ಕಾಲ ಆಗಿದ್ದ್. ಬಹುಶಃ ಆ ಕಾಲಕ್ಕೆ 'ಕದಂಬ' ಚಂದ್ರವರ್ಮನ ವಂಶಜ' ಕತೆ ಸ ಸ್ಪಷ್ಟಆಗಿ, ಸ್ವರೂಪ ಪಡ್ದುಕಂಡುಟು. ಕೊಡಗ್‌ನ ಮೂಲ ಮೂಲ ನಿವಾಸಿಗಳ್ಲೆ ದಲಿತವರ್ಗದ ಕೆಂಬಟ್ಟಿ ಜನಾಂಗಲಿ ಕಾವೇರಿ ಕುರಿತ ಹಾಡಿಯೋಳೊ. ಅದರ ರೀತಿಲಿ ಕವೇರಂದು ಮಗ್ಳು ಕಾವೇರಿನ ಕೈ ಹಿಡಿಯಕೆ ಅಗಸ್ತ್ಯ ಮತ್ತೆ ಕಶ್ಯಪ ಮುನಿಯ ನಡುಲಿ ಸ್ಪರ್ಧೆ ಇದ್ದದೆ. ಕಡೇಗೆ ಅಗಸ್ತ್ಯ ಮುನಿ ಗೆದ್ದ್ 'ಹೂ ಮೊದ್ವೆ' ಮಾಡಿ ಕಂಡದೆ. ಕಾವೇರಿ ಪುರಾಣಲಿ ಇಲ್ಲದ ಈ ಕತೆ ಪರಿಶಿಷ್ಟರ ಪಥದಲಿ ಮೂಲಕತೆಯಾಗಿ ಕಂಡದೆ. ಅಗಸ್ತ್ಯಮುನಿಗೂ ಪರಿಶಿಷ್ಟ ವರ್ಗದವುಕೆ ಒಂದು ರೀತೀಲಿ ಪ್ರಾಚೀನ ಸಂಬಂಧದ ಹೆಣ್ಣ್ ಇದಾಗುಟ್ಟು.

ಇದರ ಹಿಂದೇನ ವಿಷಯ ಏನ್‌ತೇಳ್ರೆ ಕಾವೇರಿ 'ಮೊದಲ್ ಕಾವೇರಿ' ಅಥವಾ 'ತಲಕಾವೇರಿಂದ' ಚಿಮ್ಮಿಕಂಡು ಇಂದು ಸು.765. ಕಿ.ಮೀ. (475 ಮೈಲಿ) ದೂರ ಹರ್ದು ಪೂರ್ವ ದಿಕ್ಕ್‌ನ ಬಂಗಾಳಕೊಲ್ಲಿಗೆ ಸೇರ್‌ದೆ. ಕೊಡಗ್ ಬಿಟ್ಟ ಮೇಲೆ ಹಾಸನ, ಮೈಸೂರು, ಮಂಡ್ಯ ಮತ್ತೆ ಬೆಂಗಳೂರು ಜಿಲ್ಲೆಲಿ ಹರ್ದು ತಮಿಳುನಾಡಿಗೆ ಸಾಗಿದೆ. ಅಲ್ಲಿ ಧರ್ಮಪುರಿ, ಸೇಲಂ, ಮತ್ತೆ ತಿರುಚಿನಾಪಳ್ಳಿ ಜಿಲ್ಲೆಲಿ ಹರ್ದದೆ. ಮುಕ್ಕುಂ ತೇಳುವಲ್ಲಿ ಕೊಲ್ಲಡೆಂ (ಉತ್ತರ ಭಾಗ) ಮತ್ತೆ ಕಾವೇರಿ (ದಕ್ಷಿಣ ಭಾಗ) ಅಲ್ಲಿ ಕವಲಾಗಿ ಹರ್ದ್ ಶ್ರೀರಂಗಪಟ್ಟಣನ ಬಳ್ಸಿ ಮತ್ತೆ ಸೇರಿಕಂಡದೆ. ಇದು ಆದಂಗೆ 12 ಊರುಗಳನ್ನ ದಾಟಿ ಕಾವೇರಿ ಪೂಂಪಟ್ಟಣದ ಹತ್ರ ಬಂಗಾಳಕೊಲ್ಲಿನ ಸೇರ್‌ದೆ. ಈ ಪೂಂಪಟ್ಟಣದ ಹೆಸ್ರು, ಹೂ ಪಟ್ಟಣ ತೇಳ್ವ. ಅರ್ಥ ಬಂದದೆ. ಈ ಸಂದರ್ಭಲಿ ಅಗಸ್ತ್ಯನ ಸಮುದ್ರ ಪೋಶನ ಕತೆ. ಇದೆಲ್ಲ ಕಾವೇರಿ ಅಗಸ್ತ್ಯನ ನಡೂಲಿ "ಹೂ ಮೊದ್ವೆ'ಲಿ ಸಂಕೇತವಾದಂಗೆ ಕಂಡದೆ.

---

**ಎಂ.ವಿ. ಮೋಹನ್ ಕುಮಾರ್**
ಭದ್ರಗೋಳ ಗ್ರಾಮ ಮತ್ತು ಅಂಚೆ
ತಾರಿಕಟ್ಟೆ, ತಿತಿಮತಿ. ದ.ಕೊಡಗು

# ಯಕ್ಷ ಪ್ರಶ್ನೆ

● ಕುಂಞೇಟಿ ಶಿವರಾಮ ಗೌಡ (ವ್ಯಾಸ)

ಜೂಜಾಟಲಿ ಸೋತ ಪಾಂಡವರ ಹನ್ನೆರ್ಡ್‌ವರ್ಸ ವನವಾಸ ಅಕೇರಿ ಆಗ್ತಾ ಬಂದದೆ. ಒಂದು ದಿನ ಒಬ್ಬ ಬಡ ಬ್ರಾಹ್ಮಣನ ಕಿಚ್ಚ್ ನಂಡ್ವ ಉಪಕರಣನ ಕಾಡಿಲಿರ್ವ ಒಂದು ಸಾರಂಗ ಅದರ ಕೊಂಬಿಗೆ ಸಿಕ್ಕಿಸಿಕಂಡ್ ಕಾಡ್ ಕಡೆಗೆ ಓಡಿ ಹೋತ್. ಕಿಚ್ಚ್ ಮಾಡ್ವ ಸಾದನ ಇಲ್ಲದೆ ಬ್ರಾಹ್ಮಣ ಅಗ್ನಿಹೋತ್ರ ಮಾಡಿಕೆ ಆದುಲೆ. ಅಂವನ ಕಷ್ಟನ ಇಲ್ಲೆ ಇದ್ದ ಪಾಂಡವರ ಹಕ್ಕಲೆ ಬಂದ್ "ನನ್ನ ಉಪಕರಣನ ತಂದ್ ಕೊಡೂಕುಂತ" ಬೇಡಿ ಕಂಡದೆ.

ಬಡ ಬ್ರಾಹ್ಮಣನ ಮಾತ್‌ನ ಕೇಳಿ ಪಾಂಡವು ಬಿಲ್ಲ್ ಬಾಣ ತಕಂಡ್ ಸಾರಂಗನ ಓಡ್ಸಿಕಂಡ್ ಕಾಡ್‌ಲಿ ತುಂಬಾ ದೂರ ಹೋದೊ. ದಟ್ಟ ಅರಣ್ಯಲಿ ಸಾರಂಗ ಪಾಂಡವರ ಕಣ್ಣ್ ತಪ್ಸಿ ಕಡೆಲಿ ಕಾಣದಾತ್. ಪಾಂಡವುಕ್ಕೆ ಬಡ ಬ್ರಾಹ್ಮಣನ ಸಣ್ಣ ಕೆಲ್ಸನೂ ಮಾಡೆ ಸಾಧ್ಯ ಆಗದೆ ತಮ್ಮ ಸಕ್ತಿನ ಮೇಲೆ ಅವುಕ್ಕೇ ಜಿಗುಪ್ಸೆ ಬಾತ್.

ಕಾಡ್ಲಿ ಸಾರಂಗನ ಓಡ್ಸಿಕಂಡ್ ತುಂಬಾ ದೂರ ಹೋದ ಪಾಂಡವುಕೆ ಬೊಚ್ಚಿ ಹೋತ್ ಮಾತ್ರ ಅಲ್ಲ ಕುಡೆಕೆ ಆಗಿ ಜೀವ ಹೋವಂಗೆ ಆದೆ. ತಮ್ಮ ನಕುಲನ ಹಕ್ಕಲೆ ಕರ್ದ್ ಯುಧಿಷ್ಠಿರ ಹೇಳ್ದೆ, "ಎಲ್ಯಾರ್ ಹಕ್ಕಲೆ ನೀರ್ ಇದ್ದರೆ ಬೇಗ ತಕಂಡಬಾ, ನಂಗೆ ಕುಡೆಕೆ ಆಗಿ ತಡೆಗೆ ಬೊತ್ತ್" ಅಲ್ಲೆ ಹಕ್ಕಲೆ ಇದ್ದ ದೊಡ್ಡ ಮರದ ಕೊಡಿಗೆ ಹತ್ತಿ ಸುತ್ತ ಮುತ್ತ ನೋಡ್ಕನ, ಹನಿಯ ದೂರಲಿ ಬೆಳಿ ಕೊರ್‌ಂಗ್‌ಗ ಹಾರ್ದು ಕಂಡೆದೆ. ಅಲ್ಲಿ ನೀರ್ ಸಿಕ್ಕುದುಂತ ನಕುಲ ಮರಂದ ಇಳ್ದ್

ನೀರ್ ತಾಕೆ ಕಾಡ್‌ಲಿ ಮುಂದೆಹೋತ್, ವೊಸಿ ದೂರ ಹೋಕನ ಒಂದ್ ಪಳ ಪಳ ಹೊಳೆವ ಸುದ್ದ ನೀರ್‌ನ ಕೆರೆ ಕಂಡದೆ. ನಕುಲಂಗೂ ಕುಡೆಕೆ ತಡೆಕೆ ಬೊತ್ತು. ಅಂವ ನೀರ್ ಕುಡೆಕೆ ಕೆರೆಗೆ ಇಳ್ದದೆ. ಅಷ್ಟ್ ಹೊತ್ತಿಗೆ ಎದ್ರ್ ಕಡೆಂದ ಬಂದ ಅದೃಶ್ಯ ದನಿ ಕೇಳ್ದ್. "ಇದ್ ನನ್ನಕೆರೆ, ನಾ ಕೇಳ್ವ ಪ್ರಶ್ನೆಗೆ ಉತ್ತರ ಕೊಟ್ಟ್ ಮತ್ತೆ ನೀರ್ ಕುಡಿ. ಇಲ್ಲೆಂತಾದರೆ ನಿಂಗೆ ಅಪಾಯ ಕಂಡಿತಂತ" ಹೇಳ್ದ್. ಆ ಮಾತ್‌ನ ಲೆಕ್ಕಕೆ ತಕಣದೆ ಕೆರೆಗೆ ಇಳ್ದ್ ನಕುಲ ಹೊಟ್ಟೆ ತುಂಬಾ ನೀರ್ ಕುಡ್ತ್. ತಲೆ ತಿರ್ಗಿದಂಗೆ ಆಗಿ ನಕುಲ ಅಲ್ಲೆ ಸೊಯತಪ್ಪಿ ಬಿದ್ದ್ ಹೋತ್.

ನಕುಲನ ಕಾಣದೆ ಯುಧಿಷ್ಠಿರ ಸಹದೇವನ ಕರ್ದ್ ಬೇಗ ಹೋಗಿ ನೀರ್ ತಕಂಡ್ ಬಾಕೆ ಕಳ್ಸಿದೆ. ಸಹದೇವಂಗೆ ಕೆರೆನ ನೀರ್ ನೋಡಿ ಕುಸಿ ಆತ್. ಮುಂದೆ ನೀರ್ ಕುಡ್ದ್ ನಕುಲು ಬಿದ್ದಲ್ಲಿ ಹೋವುದುಂತ ಆಲೋಚನೆ ಮಾಡ್ತ್. ಸಹದೇವ ನೀರಿನ ಕೆರೆ ಹಕ್ಕಲೆ ಹೋಗಿ ಸುರುಗೆ ನೀರ್ ಕುಡೆಕೆ ಕೆರೆಗೆ ಇಳ್ತ್. ನಕುಲಂಗೆ ಪ್ರಶ್ನೆ ಕೇಳ್ದಾಂಗೆ ನನ್ನ ಪ್ರಶ್ನೆಗೆ ಉತ್ತರ ಕೊಟ್ಟು ಮತ್ತೆ ನೀರ್ ಕುಡಿಂತ ದನಿ ಹೇಳ್ದ್. ಸಹದೇವಂಗೂ ಕುಡೆಕೆ ಆಗಿ ಬೊತ್ತು. ಅಂವ ಬೇಕಾದಷ್ಟ್ ನೀರ್ ಕುಡ್ದ್ ನಕುಲನ ಹಕ್ಕಲೆ ಹೋಗಿ, ಅಂವನೂ ಸತ್ತ್ ಬೀತ್. ನಕುಲ ಸಹದೇವ ಇಬ್ಬರೂ ಹಿಂದೆ ಬಾರದರ ನೋಡಿ ಏನೋ ಅಪಾಯ ಆಗುಟೂಂತ ಮಸ್ಸಲಿ ಗ್ರೇಸಿ ಯುಧಿಷ್ಠಿರ ಮೂರು ಲೋಕಲೇ ವೀರಾದಿವೀರಂತ ಹೆಸ್ರ್ ಪಡ್ದ ಅರ್ಜುನನ ಕರ್ದ್ ತಮ್ಮಂದರ್ ಬೇಗ ಹುಡ್ಕಿ ನೀರ ತಕಂಡ್ ಬಾಕೆ ಹೇಳ್ದ್. ಅರ್ಜುನನೂ ಕೆರೆ ಹಕ್ಕಲೆ ಎತ್ತಿ ನೋಡ್ಕನ ಇಬ್ಬೊರು ತಮ್ಮಂದರ್ ಸತ್ತ್ ಬಿದ್ದದ್ ಕಂತದೆ, ಅವರ ಹಕ್ಕಲೆ ಹೋಕೆ ಮುಂದೆ, ನೀರ್ ಕುಡ್ಕಣೆಂತ ಕೆರೆಗೆ ಇಳ್ತ್. ಹಿಂದೆನಾಂಗೆ ಅದೃಶ್ಯ ಸ್ವರ ಕೇಳ್ದ್. "ಇದ್ ನನ್ನ ಕೆರೆ, ನನ್ನ ಪ್ರಶ್ನೆಗಳಿಗೆ ಉತ್ತರ ಕೊಟ್ಟು ನೀರ್ ಕುಡಿಂತ ಹೇಳ್ದ್". ಅರ್ಜುನಂಗೆ ಬಾರಿ ಸಿಟ್ಟ್ ಬಂದ್ ದನಿ ಬಾವ ಕಡೆಗೆ ಬಾಣಗಳ ಒಂದರ ಮೇಲೆ ಒಂದು ಬುಟ್ಟತ್. ನಿನ್ನ ಬಾಣ ನಂಗೆ ಯಾವ ಲೆಕ್ಕಕೂ ಇಲ್ಲೆಂತ ಗರ್ವದ ಸ್ವರಲಿ ಅತ್ತಂದ ಉತ್ತರ ಬಾತ್. ಅರ್ಜುನಂಗೆ ಕುಡೆಕೆ ಆಗಿ ತಡೆಕೆ ಬೊತ್ತು. ಅಂವ ಕೆರೆಂದ ಬೇಕಾದಷ್ಟ ನೀರ್ ಕುಡ್ತ್. ನೀರ್ ಕುಡ್ದದೇ ಕ್ಷಣ ಹೊತ್ತಿಲಿ ಅರ್ಜುನನೂ ಸತ್ತ್ ಬಿದ್ದೊತು.

ನೀರ್ ತಾಕೆ ಹೋದ ಅರ್ಜುನನೂ ಹಿಂದೆ ಬಾರದರ ನೋಡಿ

ಯುಧಿಷ್ಠಿರಂಗೆ ಬಾರಿ ಹೆದ್ರಿಕೆ ಮತ್ತೆ ದೊಡ್ಡ ಅಪಾಯ ಆಗಿರೊಕೂಂತ ಮನ್ಸಿಲಿ ದುಕ್ಕ ಸುರು ಆತ್. ಅಕೇರಿಗೆ ಯುಧಿಷ್ಠಿರ ಹದಿನಾರ್ ಸಾವಿರ ಆನೆಗಳ ಬಲ ಇರ್ವ ಭೀಮನ, ತಮ್ಮಂದರ ಹುಡ್ಕಿಕೆ ಕಳ್ಸಿದೆ. ಕೆರೆ ಹಕ್ಕಲೆ ಎತ್ತಿದ ಭೀಮ ಮೂರು ಜನ ತಮ್ಮಂದರ್ ಸತ್ತ್ ಬಿದ್ದರ ನೋಡಿ ಬಾರಿ ಸಿಟ್ ಬಂದ್ ಸುತ್ತ ಮುತ್ತ ನೋಡ್ದೆ ಅಷ್ಟೊತ್ತಿಗೆ ಹಿಂದೆನಾಂಗೆ ಬೀಮಂಗೂ ಕೆರೆಕಡೆಂದ ಅದೇ ಪ್ರಶ್ನೆ ಕೇಳಿ ಬಂದದೆ. ಬೀಮನ ಸಿಟ್ಟ್ ನೆತ್ತಿಗೆ ಏರ್ದೆ "ನೀ ಯಾರ್ ನಂಗೆ ಆದೇಸ ಮಾಡ್ಕೆ, ಧೈರ ಇದ್ದರೆ ಎದ್‌ರ್ ಬಂದ್ ನಿಲ್ಲ್‌ಂತ" ಹೇಳ್ದೆ. ಭೀಮನೂ ಕೆರೆ ನೀರ್ ಕುಡ್ದ್ ಅಂವನೂ ತಮ್ಮಂದರ ಹಕ್ಕಲೆ ಬಿದ್ದ್ ಹೋತ್.

ಎಷ್ಟ್ ಹೊತ್ತಾದ್ರೂ ತಮ್ಮಂದರ್ ಹಿಂದೆ ಬಾರದ ಕಾರ್ಣ ಯುಧಿಷ್ಠಿರ ಅಂವನ ದುರಾದೃಷ್ಟನ ನೆನ್ಸಿಕಂಡ್ ತಮ್ಮಂದರ್ ಹೋದ ದಿಕ್ಕಿಲಿ ಕಾಡ್ ಕಡೆಗೆ ಹೋಗಿ ನೋಡ್ಕನ ನಾಲ್ಕ್ ಜನ ತಮ್ಮಂದರ್ ಸತ್ತ್ ಬಿದ್ದದರ ನೋಡಿ ಸಣ್ಣ ಮಕ್ಕಳಂಗೆ ದೊಡ್ಡ ಸ್ವರ ತೆಗ್ದ್ ಮರ್ಡಿಕೆ ಸುರು ಮಾಡ್ತ್. ಯುಧಿಷ್ಠಿರ ತಮ್ಮಂದರ ಹಕ್ಕಲೆ ಹೋಗಿ ನೋಡ್ಕನ ಅವರ ಮೈ ಮೇಲೆ ಯಾವ ಗಾಯದ ಗುರ್ತಕಾಂಬೊದಿಲ್ಲೆ, ಮುಕಲಿ ಇನ್ನೂ ಒಂದು ರೀತಿನ ಕಳೆ ಕಂಡದೆ. ಜಗಳ ಪೆಟ್ಟ್‌ಗುಟ್ಟು ಆದ ಹಜ್ಜೆ ಗುರ್ತ್‌ಯಾವುದೂ ಅಲ್ಲಿ ಕಾಂಬೋದಿಲ್ಲೆ. ಆಗ ಇದ್ ಯಾವುದೋ "ಯಕ್ಷ"ನ ಕೆಲ್ಸಂತ ಅಂದಾಜಾತ್. ಇದ್ ಸಾಮಾನ್ಯ ಮೊನ್ಸ್‌ರ್ ಕೆಲ್ಸ ಅಲ್ಲಂತ ಗೊತ್ತಾಗಿ, ಬಾಯಿ ದೊಂಕೆ ಕಳೆಮಾಂತ ನೀರ್ ಕುಡೆಕೆ ಕೆರೆಗೆ ಇಳ್ದದೆ. ಎದ್ರ್ ಕಡೆಂದ ಹಿಂದೆ ನಂಗೆ ಎಚ್ಚರಿಗೆ ಮಾತ್ ಕೇಳ್ದೆ. "ಯುಧಿಷ್ಠಿರಾ ನನ್ನ ಮಾತ್ ಕೇಳದೆ ನಿನ್ನ ತಮ್ಮಂದರ್ ಸತ್ತ್ ಬಿದ್ದೊಳೊ. ನೀ ನನ್ನ ಪ್ರಶ್ನೆಗಳಿಗೆ ಸರಿ ಉತ್ತರ ಕೊಟ್ಟು ಮತ್ತೆ ನೀರ್ ಕುಡಿ ತಪ್ಪಿರೆ ನೀನೂ ಸತ್ತಿಗಂತ" ಹೇಳ್ತ್. ಯುಧಿಷ್ಠಿರಂಗೆ ಇದ್ ಕಂಡಿತ ಒಬ್ಬ ಯಕ್ಷನ ಕಿತಾಪತಿಂತ ತಲೆಗೆ ಹೋತ್. ಅಂವ ಯಕ್ಷನ ದನಿ ಕಡೆಗೆ ಮುಕ ಮಾಡಿ "ನಿನ್ನ ಪ್ರಶ್ನೆ ಕೇಳ್‌ಂತ" ಹೇಳ್ದೆ. ಯಕ್ಷ ಒಂದರ ಮೇಲೆ ಒಂದು ತುಂಬಾ ಪ್ರಶ್ನೆ ಕೇಳ್ತಾ ಹೋದ್ದೆ.

ಯಕ್ಷ : "ಸೂರ್ಯ ದಿನಾಲೂ ಪ್ರಕಾಶಂದ ಹೊಳೆಕೆಯರ್ ಕಾರ್ಣ"?
ಯುದಿ : "ಬ್ರಹ್ಮನ ಸಕ್ತಿಂದ ಸೂರ್ಯ ದಿನಾಳೂ ಪ್ರಕಾಸ ಬೆಳ್ಕ್‌ಕೊಟ್ಟದೆ"
ಯಕ್ಷ : "ಅಪಾಯಲಿ ಮೊನ್ಸ್‌ನ ಯಾವುದು ಕಾಪಾಡ್ದೆ?
ಯುದಿ : "ಧೈರ್ಯವೇ ಮೊನ್ಸ್‌ನ ಅಪಾಯಂದ ಕಾಪಾಡ್ದೆ"

ಯಕ್ಷ : “ಯಾವ ವಿದ್ಯೆಂದ ಮೊನ್ಸ ಜ್ಞಾನಿ ಆದ್ದೆ?
ಯುದಿ : “ಮೊನ್ಸ ಜ್ಞಾನಿಗಳ ಒಡನಾಟಂದ ಜ್ಞಾನ ಪಡ್ದದೆ”
ಯಕ್ಷ : “ಭೂಮಿಂದ ಹೆಚ್ಚ್ ನಮ್ಮ ರಕ್ಷಣೆ ಮಾಡೊವು ಯಾರ್?”
ಯುದಿ : “ಅವ್ವ, ಭೂಮಿಂದ ಹೆಚ್ಚ್ ನಮ್ಮ ಹೆತ್ತ್ ಹೊತ್ತ್ ಸಾಂಕಿದೆ”.
ಯಕ್ಷ : “ಆಕಾಸಕ್ಕಿಂತ ಎತ್ತರ ಯಾರ್?
ಯುದಿ : “ಅಪ್ಪ”
ಯಕ್ಷ : “ಗಾಳಿಗಂತ ವೇಗವಾಗಿ ಯಾವುದು ಹೋದ್ದೆ?
ಯುದಿ : “ಮನ್ಸ್”
ಯಕ್ಷ : “ಪ್ರವಾಸಿಗೆ ಯಾರ್ ಸಿನೇತ”?
ಯುದಿ : “ಅಂವಕಲ್ತ ವಿದ್ಯೆ”
ಯಕ್ಷ : “ಮೆನೆಲಿ ನಮ್ಮ ಸಿನೇತ ಯಾರ್?
ಯುದಿ : “ಕೈ ಹಿಡ್ದ ಹೆಣ್ಣ್”
ಯಕ್ಷ : “ಸಾಯಕನ ನಮ್ಮೊಟ್ಟಿಗೆ ಯಾರ್ ಬಂದವೆ”?
ಯುದಿ : “ಧರ್ಮ”
ಯಕ್ಷ : “ಯಾವುದು ದೊಡ್ಡ ಹಡ್ಗ್”?
ಯುದಿ : “ಭೂಮಿ”
ಯಕ್ಷ : “ಸಂತೋಸ ಯಾಗ ಸಿಕ್ಕಿದೆ”?
ಯುದಿ : “ಉತ್ತಮ ನಡತೆಂದ”
ಯಕ್ಷ : “ಯಾವುದರ ಬುಟ್ಟರೆ ಮೊನ್ಸ್‌ನ ಎಲ್ಲವೂ ಪ್ರೀತಿ ಮಾಡ್ವೆ?
ಯುದಿ : “ಜಂಬನ ಬುಟ್ಟರೆ ಎಲ್ಲವು ಪ್ರೀತಿ ತೊರ್ರುವೆ”.
ಯಕ್ಷ : “ನಿಜವಾದ ಬ್ರಾಹ್ಮಣ ಹುಟ್ಟಿಂದಳೋ, ಜ್ಞಾನಂದಳೋ”?
ಯುದಿ : “ಹುಟ್ಟು ಅಲ್ಲ, ಒಳ್ಳೆ ಗುಣದ ಒಬ್ಬ ಬ್ರಾಹ್ಮಣ ಆದ್ದೆ”
ಯಕ್ಷ : “ಪ್ರಪಂಚಲಿ ಬಾರಿ ಆಶ್ಚರ್ಯ ಯಾವುದು”?
ಯುದಿ : “ಪ್ರತಿದಿನ ಮೊನ್ಸ್‌ರ್ ಸತ್ತ್ ನಮ್ಮ ಎದ್ರ್‌ಲೆ ಯಮನಲ್ಲಿಗೆ ಹೋದವೆ, ಆದರೆ ಉಳ್ದವು ನಾವು ಯಾಗೋಳು ಜೀವಂತ ಇರವೊಂತ ನಂಬುವೆ.”

ಹೀಂಗೆ ಯಕ್ಷ ತುಂಬಾ ಪ್ರಶ್ನೆಗಳ ಕೇಳ್ದೆ. ಯುಧಿಷ್ಠಿರ ಎಲ್ಲಾ ಪ್ರಶ್ನೆಗಳಿಗೆ ಸಮರ್ಪಕ ಉತ್ತರ ಕೊಟ್ಟಿತ್. ಯಕ್ಷಂಗೆ ತೃಪ್ತಿ ಆಗಿ ಈಗ ನಿನ್ನ ತಮ್ಮಂದರ್ಲಿ ಒಬ್ಬನ ಜೀವಂತ ಬಾವಂಗೆ ಮಾಡ್ನೆ, ಯಾರ್ನ್ ಬೊದ್ಕುಸುಕುಂತ

ಹೇಳ್"ಂತ ಯಕ್ಷ ಕೇಳ್ದೆ. ಹನಿಯ ಹೊತ್ತ್ ಆಲೋಚನೆ ಮಾಡಿ ನಕುಲನ ಜೀವ ಮಾಡ್ಕೆ ಯುಧಿಷ್ಠಿರ ಕೇಳಿಕಂತ್. ಆರ್‌ವತ್ತು ಸಾವಿರ ಆನೆ ಬಲದ ಬೀಮ. ಬಿಲ್ಲ್ ವಿದ್ಯೆಲಿ ಮೂರು ಲೋಕಲಿ ಹೆಸ್ರ್ ಪಡ್ಡ ಆರ್ಜುನನ ಬುಟ್ಟ್ ನಕುಲನಯಾಕೆ ಜೀವ ಮಾಡ್ಕೆ ಹೇಳ್ದಂತ ಯಕ್ಷ ಪ್ರಶ್ನೆ ಮಾಡ್ದೆ. ಆಗ ಯುದಿಷ್ಠಿರ ಕೊಟ್ಟ ಉತ್ತರ ಮೊನ್ನ ಜನಾಂಗಕ್ಕೆ ಒಂದು ಮಾದರಿಂತ ಕಂಡ್ ಬಂದದೆ ನಮ್ಮ ಅಪ್ಪ ಪಾಂಡುರಾಜರಿಗೆ ಇಬ್ಬೊರು ರಾಣಿಗ, ಕುಂತಿ ಮತ್ತೆ ಮಾದ್ರಿ. ಕುಂತಿನ ಮಂಜ, ನಾ ಜೀವಂತ ಆಗಿ ವೊಳೆ. ಹಂಗೆನೆ ಮಾದ್ರಿನ ಒಬ್ಬ ಮಂಜ ಜೀವಲಿ ಬಂದರೆ ಅವರ ದುಕ್ಕ ಹನಿಯಾರ್ ಕಮ್ಮಿ ಆದುಂತ ನಕುಲನ ಜೀವ ಮಾಡ್ಕೆ ಹೇಳ್ದೆಂತ, ಒಂದ್ ಸರ್ವಕಾಲದ ನೀತಿನ ಯುದಿಷ್ಠಿರ ಲೋಕಕ್ಕೆ ಕೊಟ್ಟತ್. ಯುದಿಷ್ಠಿರನ ಧರ್ಮಸಮ್ಮತ ಮಾತ್‌ಂದ ತೃಪ್ತಿ ಹೊಂದಿದ ಯಕ್ಷ ಬೀಮ, ಅರ್ಜುನ, ಸಹದೇವಂಗೂ ಜೀವಕೊಟ್ಟು ಬೊದ್ಕಿಸಿತ್. ಯುದಿಷ್ಠಿರನ ಅಪ್ಪ ಯಮದರ್ಮರಾಜನೇ ಯಕ್ಷನ ರೂಪಲಿ ಅವನ ಪರೀಕ್ಷೆ ಮಾಡ್ಕೆ ಬಂದ್. ಮೆಚ್ಚಿ ಯುದಿಷ್ಠಿರಂಗೆ ಮುಂದೆ ಕಷ್ಟಗ ಪರಿಹಾರ ಆದೆಂತ ಆಶೀರ್ವಾದ ಮಾಡಿ ಮಾಯಕ ಆತ್.

**ಕುಂಞೇಟಿ ಶಿವರಾಮ ಗೌಡ (ವ್ಯಾಸ)**
ಮೊಬೈಲ್ : 8762121694




# ಮಕ್ಕಳ್ಳಿ ರೋಗ ನಿರೋಧಕ ಸಕ್ತಿ ಹೇಂಗೆ ಹೆಚ್ಚುಸುದು

● ಡಾ: ನಿವೇದಿತಾ ಎ.ಪಿ.

ಬೊಳ್ಪುಗೆ ಎದ್ದ್ ಸಾಲೆಗೆ ಹೊರ್ಟ್ ಹೋಗಿ, ಸಾಲಿಲಿ ಜೋಸ್ತಿಗಳೊಟ್ಟಿಗೆ ಕಲಿಯೊದರೊಟ್ಟಿಗೆ ಆಟಗಳ ಆಡಿಕಂಡಿದ್ದ ಮಕ್ಕ, ಈ ಕೊರೋನಾ ಬಂದ ಮೇಲೆ ಸಾಲೆಗಳೂ ಇಲ್ಲೆ, ಆಟಗಳೂ ಇಲ್ಲದೆ ಮನೆಲೇ ಕುಕ್ಕುರು ಬೊಡ್ಡೊಳೊ. ಮತ್ತೆ ಆನ್‌ಲೈನ್ ಕ್ಲಾಸ್‌ಂತ ಸುರಾಗಿ ಮೊಬೈಲ್, ಲ್ಯಾಪ್ ಟಾಪ್‌ಗಳೊಟ್ಟಿಗೆ ಟಿ.ವಿ.ಗಳ ಮುಂದೆನೇ ಲಾಕ್ ಡೌನ್ ಆಗಿಬುಟ್ಟೊಳೊ. ಇದರೊಟ್ಟಿಗೆ ಏನೆಲ್ಲಾ ಬೇಡದ ತಿಂಡಿ ತಿನ್ಸ್‌ಗಳ ತಿಂಬೊದರ್‌ಂದ ಮಕ್ಕಳ ಆರೋಗ್ಯಲಿ ಏರ್ ಪೇರ್ ಆಕಂಡ್ ಇದ್ದದೆ. ಕೆಲವುಕೆ ಆಗಾಗ ಸೀತ, ನೆಗ್ಡಿ, ಕೆಮ್ಮು, ಜೆರ. ಇನ್ನ್ ಕೆಲವು ಗುಂಡಣ್ಣ, ಗುಂಡಮ್ಮಗ ಆದು ಕಂಡದೆ. ಮಕ್ಕಳಿಗೆ ಆಗಾಗ ಒಂದಲ್ಲ ಒಂದು ಕಾಯಿಲೆ ಬಾಕೆ ಅವರ ಸೈರಲಿ ರೋಗ ನಿರೋಧಕ ಸಕ್ತಿ ಇಲ್ಲದಿರುದೇ ಕಾರಣ ಆದೆ. ಹಂಗಾಗಿ ಮಕ್ಕಳ ಆಹಾರ ಪದ್ದತಿಲಿ ರೋಗ ನಿರೋಧಕ ಸಕ್ತಿ ಪ್ರಮುಕ ಪಾತ್ರ ವಯಿಸಿದೆ.

ಹಿಂದೆನ ಕಾಲಲಿ ಈಗನ ಮೊದ್ದುಗ ಯಾದೂ ಇತ್ಲೆ, ಆದರೂ ಜೆನ ರೋಗದ ಪೀಡೆ ಇಲ್ಲದೆ ನಿಶ್ಚಿಂತೆಂದ ಬೊದ್ಕಿಕಂಡ್ ಇದ್ದೊ. ಆಯುರ್ವೇದದ ಪ್ರಕಾರ ರೋಗ ನಿರೋಧಕ ಸಕ್ತಿ ಮೊನ್ಸನ ಸೈರಲಿ ವೃದ್ಧಿಯಾದು "ಮೊದ್ದು"ಗಳ್‌ಂದ ಅಲ್ಲ., ನಮ್ಮ ಆಹಾರ – ವಿಹಾರಗ ಸೆರಿಯಾಗಿದ್ದರೆ ಯಾವುದೇ ವೈರಾಣುಗ ನಾವುಗೆ ತೊಂದರೆ ಕೊಡಿಕಿಲ್ಲೆ, ತೊಂದರೆ ಕೊಟ್ಟರೂ ಆದಸ್ಟ್ ಬೇಗ ಸೌಕ್ಯ ಆಕೆ ಸಾಧ್ಯಾದೆ. ಈಗನ ವೈರಸ್, ಬ್ಯಾಕ್ಟೀರಿಯಾ, ಫಂಗಸ್ ಗಳಿಗೆ ನಮ್ಮ ಸೈರ ಒಡ್ಡಿಕಂಬಕನೇ ರೋಗ ನಿರೋಧಕ ಸಕ್ತಿ ಪಕ್ವವಾದು. (Immune system matures) ಹೊರ್ತು ಒಡ್ಡಿಕಣದೆ ಇದ್ದರೆ ಅಲ್ಲ.

ಒಂದು ಸೋಂಕು ಸೋಂಕಿಕನ ಸುರುನ ಎರ್ಡ್ ಮೂರು ದಿನಗ ಅತ್ಯಂತ ಪ್ರಮುಖಾಗಿದ್ದದೆ. ಸಣ್ಣ ಲಕ್ಸಣ ಕಂಡ ಕೂಡ್ಲೇ ನಾವು ಎಚ್ಚರಂದ ಸೆರಿಯಾದ ಕ್ರಮಗಳ ಪಾಲ್ಸಿರೆ, ಸೋಂಕು ಎರಡ್ನೇ ಹಂತಕ್ಕೆ ಹೋದುಲೆ.

ಜೀವಕಣಗಳ ಪೋಷಕ ದ್ರವ್ಯಗ (Cellular metabolism) ನಮ್ಮ ಸೈರಲಿ ಅತ್ಯಂತ ಪ್ರಮುಖ ಪಾತ್ರದಾರಿ. ದುರಾದೃಷ್ಟಂದ ಈ ಅಂಸನ ಪರಿಗಣ್ಸದೇ ಇರ್ದು ದೌರ್ಭಾಗ್ಯಂತಳೇ ಹೇಳೊಕು. ಹಾಂಗಾಗಿ ಒಬ್ಬ ಮೊನ್ಸ ಯಾವ್ದೇ ಸೋಂಕು ಸೋಂಕುಕನ (ಉಸ್ರಾಟದ / ಕರ್ಳ್‌ನ/ ಮೂತ್ರ ಕೋಸದ/ ಬೇರೆ ಯಾವುದೇ ಅಂಗದ ಸೋಂಕಾದರೂ ಸೆರಿ) ಮುಖ್ಯ ನೆನ್ಪಿಸಿಕಣಕಾದ ಅಂಸಗ ಈ ರೀತಿ ಉಟ್ಟು.

ಸೆರಿಯಾಗಿ ಹೊಟ್ಟೆ ಹಸಿಯಕನ ಮುಟ್ಟ ಯಾವುದನ್ನೂ ತಿಂಬಕೆ ಆಗದ್. 70% ರೋಗ ನಿರೋಧಕ ಸಕ್ತಿಗೆ ಬೇಕಾದ ಜೀವಕೋಶಗ ನಮ್ಮ ಜಠರ ಮತ್ತೆ ಕರ್ಳ್‌ಲಿ ಇದ್ದದೆ. ಸೋಂಕಿಗೆ ಒಳಗಾದವಂಗೆ ಸುರುನ ಸೂಚನೆನೇ ಹೊಟ್ಟೆ ಹಸಿಯದಿರ್ದು. ಆಗ ಬಿಸಿ ನೀರ್ ಅಥವಾ ಔಷಧೀಕೃತ ಜಲ (Medicated water) ಹಂಜ ಹಂಜನೇ ಪ್ರತಿ 20 ನಿಮ್ಸಕ್ಕೊಮ್ಮೆ ತಕಣ್ತಾ ಇರೊಕು. ಹೊಟ್ಟೆ ಹಸಿದು ಗೊತ್ತಾಕನ ಸುಲ್ಬಲಿ ಅರ್ಗುವ ಬೇಸಿದ ಆಹಾರ ಮಾತ್ರ ತಕಣೊಕು. ಉದಾ:– ಗಂಜಿ, ಕಿಚಿಡಿ, ನೆಟ್ಟಿಕಾಯಿ ಸೂಪ್, ಬೇಸಿದ ಪದೆಂಜಿ. ಅರ್ಗಿಕೆ ಕಸ್ಟಾವ ಆಹಾರಗಾದ ಹಾಲ್, ಮೊಟ್ಟೆ, ಬಾದಾಮಿ, ಒಣ್ಗಿದ ಹಣ್ಣ್ ಗ, ಬ್ರೆಡ್ ಇಂತದರ ತಕಣಿಕೆ ಖಂಡಿತಾ ಆಗದ್. ನಮ್ಮಲ್ಲಿ ಹೆಚ್ಚಾಗಿ ಮಕ್ಕಳಿಗೆ ಉಸಾರಿಲ್ಲದೆ ಉಣದೆ ಇದ್ದರೆ ಕೂಸು ಏನೂ ತೀಂತ್ಲೆ, ಹಾಲಾರ್ ಕುಡಿಯಲಿಂತ ಹಾಲ್ ಕೊಟ್ಟವೆ, ಅದ್ ತೊಪ್ಪು, ಹಾಲ್ ಕೂಡಾ ಬೇಗ ಅರ್ಗುದುಲ್ಲೆ.

ಪ್ರತಿ ಆಹಾರಕ್ಕೂ ಅದರ್ದೇ ಆದ ಗುಣಗ ಇದ್ದದೆ. ಒಂದು ಆಹಾರನ ಬರೀ ಕ್ಯಾಲರಿಗಳ ದೃಸ್ಟಿಂದ ಅಥವಾ ಅದರ್ಲಿ ಇರುವ ಪೋಷಕಾಂಶಗಳ ದೃಸ್ಟಿಂದ ಮಾತ್ರ ಪರಿಗಣ್ಸುದು ತೊಪ್ಪು. ಆಹಾರಗಳ್ಲಿ ಸುಲ್ಬಲಿ ಅರ್ಗುದು (ಲಘು ಆಹಾರ) ಕಸ್ಟಂದ ಅರ್ಗುದು (ಗುರು ಆಹಾರ) ಸೀತನ ಹೆಚ್ಚಿಮಾಡ್ದು (ಉದಾ:– ಹಣ್ಣ್‌ಗ, ಹಸಿನೆಟ್ಟಿಕಾಯಿಗ, ಜೂಸುಗ) ಇನ್ನು ಸೈರದ ಉಷ್ಣತೆನ ಹೆಚ್ಚಿಮಾಡ್ದು (Heat promoting) ಸೈರದ ಸ್ನಿಗ್ದತೆನ ಜಾಸ್ತಿ (ಸ್ನೇಹ) ಅಥವಾ ಕಮ್ಮಿ (ರೂಕ್ಷ) ಮಾಡ್ವ ಗುಣಗಳ ಹೊಂದಿದೆ. ಆಯುರ್ವೇದಲಿ ಪ್ರತಿ ಸೈರ ಪ್ರಕೃತಿಗೆ ಅನುಗುಣಾಗಿ ಸೂಕ್ತ ಅಥವಾ ಅಸೂಕ್ತ ಆಹಾರಗಳ ವಿವರ್ಸಿಯೊಳೊ. ಹಂಗಾಗಿ ಕಾಯಿಲೆಯವುಕೆ ಆಹಾರನೇ ಮೊದ್ದಾದೆ, ಸೆರಿಯಾದ ಆಹಾರ ತಕಂಡರೆ ಅವನ ಸೈರದ ರೋಗ ನಿರೋಧಕ ಸಕ್ತಿ ರೋಗಾಣುಗಳೊಟ್ಟಿಗೆ ಹೋರಾಡ್ದೆ.

ಮಕ್ಕಳಿಗೆ ಜೆರ ಬಾಕನ ನಿಸಕ್ತಿ (Weakness) ರೋಗಂದ ಬಾದೇ ಹೊರ್ತುರ್ ಯಾವುದೇ ಪೋಷಕಾಂಶದ ಕೊರ್ತೆರ್ಂದ ಅಲ್ಲ. ಆ ಸಮಯಲಿ ಹಾಲ್ ಅಥವಾ ಪ್ರೋಟಿನ್ ಪೌಡರ್ ಹಾಂಗಿರುವ ಘನ ಆಹಾರ (Dense foods) ಕೊಡ್ದು ತೊಪ್ಪು. ಮಕ್ಕಳ ಆಹಾರಲಿ ಒಂದು ಹನಿಸಾನ್ ಎಣ್ಣೆನ ಅಂಸ ಇರಿಕೆ ಆಗದ್. ಮಕ್ಕಳಿಗೆ ಜೆರ ಇರ್ಕನ ಹತ್ತಿ ಬಟ್ಟೆನ ಕಾವ್ಲಿಲಿ ಬಿಸಿ ಮಾಡಿ (Dry hot fomentation) ಹಣೆಗೆ ಇಸೊಕು, ಆಗ ಬೆಗ್ರ್ ಲಾಯಿಕ್ ಬಂದದೆ, ಒಮ್ಮೆ ಲಾಯಿಕ್ ಬೆಗ್ರಿರೆ ಜೆರ ಮತ್ತೆ ಅದೇ ಜೋರ್ಲಿ ಇರ್ದುಲೆ, ಕಮ್ಮಿ ಆಕಂಡ್ ಹೋದೆ.

ಆರೋಗ್ಯವಂತ ಜೆನರ ದಿನಚರ್ಯೆ, ಋತುಚರ್ಯೆ, ಆಹಾರ – ವಿಹಾರ, ವ್ಯಾಯಾಮ, ನಿದ್ದೆ ಇದರ್ನೆಲ್ಲಾ ಆಯುರ್ವೇದಲಿ ಅತ್ಯಂತ ಪ್ರಮುಖಾಗಿ ಉಲ್ಲೇಖಿಸಿಯೊಳೊ. ಬೊಳ್ಪುಗೆ ಬ್ರಾಹ್ಮೀ ಮೂರ್ತಲಿ ಎದ್ರ್‌ದು, ಕಾಲಿ ಹೊಟ್ಟೆಲಿ ವ್ಯಾಯಾಮ, ವಾಕಿಂಗ್ ಮಾಡ್ದು ಒಳ್ಳೆದ್. ಮಕ್ಕ ಆಟ ಆಡೊಕು. ಮೊಬೈಲ್, ಟಿ.ವಿ. ನೋಡ್ದರ ಆದಸ್ಟ್ ಕಮ್ಮಿ ಮಾಡೊಕು. ಹೆಚ್ಚಿ ಸಮೆ ಕುದ್ದ್ ಕಂಡೋ, ಮಲ್ಕಂಡೋ ಇರ್ದು ತೊಪ್ಪು. ಸ್ವಾಸಕೋಸಗ ಸೆರಿಯಾಗಿ ಕೆಲ್ಸ ಮಾಡೊಕುಂತಾದರೆ ವ್ಯಾಯಾಮ ಅತೀ ಮುಖ್ಯ. ವ್ಯಾಯಾಮ, ಆಟಗಳ್‌ಂದ ಶ್ವಾಸಕೋಸ ಬಲಾದೆ. (Lungs capacity improves)

ಮೊನ್ಸರ್ಲಿ ಒಬ್ಬರ್‌ಂದ ಒಬ್ಬರ ಸ್ಯೆರದ ಪ್ರಕೃತಿ ಬೇರೆ ಬೇರೆ ಆಗಿದ್ದದೆ. ನಮ್ಮದೆ ಕೈನ ಬೆಳ್ಗ್ ಬೇರೆ ಬೇರೆ ಇರುವ ಹಾಂಗೆ ಅವರ್ಲಿ ಬಾವ ರೋಗಗ, ಭಾದೆಗ, ಅರ್ಗುವ ಸಕ್ತಿ, ವ್ಯಾಯಾಮದ ಸಕ್ತಿ ಎಲ್ಲಾ ಬೇರೆ ಬೇರೆನೇ ಆಗಿದ್ದದೆ. ಒಂದೊಂದು ಮಕ್ಕಳಿಗೂ ಸೋಂಕು ಸೋಂಕುಕನ ರೋಗದ ತೀವ್ರತೆನೂ ಬೇರೆ ಬೇರೆ ಇದ್ದದೆ. ಹಂಗಾಗಿ ಒಬ್ಬಂಗೆ ಬರೇ ಸೀತ ನೆಗ್ಡಿ ಸುರುವಾದರೆ, ಮತ್ತೊಬ್ಬಂಗೆ ಸ್ವಾಸಕೋಸದ ಸೋಂಕಾಗಿ ಕೆಮ್ಮು, ಉಸುರಾಡುವ ತೊಂದರೆಗ ಸುರಾಕು ಸಾಕ್. ಹಂಗಾಗಿ ಆಹಾರ, ಮೊದ್ದುಗಳ ಪ್ರಮಾಣವೂ ಎಲ್ಲಾ ಪ್ರತಿ ಮಕ್ಕಳಿಗೂ ಬೇರೆ ಬೇರೆನೇ ಆಕಾದೆ.

"ಊಟ ಬಲ್ಲವನಿಗೆ ರೋಗವಿಲ್ಲ, ಮಾತು ಬಲ್ಲವನಿಗೆ ಜಗಳವಿಲ್ಲ"ಂತ ಹೇಳುವ ಗಾದೆ ಉಟ್ಟಲ್ಲಾ ಅದ್ 100% ಸೆರಿ. ಈಗನ ಎಲ್ಲಾ ರೋಗಗ ಬಾಕೆ ರೋಗ ನಿರೋಧಕ ಸಕ್ತಿ ಕಮ್ಮಿಯಾಕೆ ಮುಖ್ಯ ಕಾರಣನೇ ಇಪ್ರೀತ

ತಿಂಬೊದು. ಮಕ್ಕಳಿಗೆ ಬೇರೆ ಬೇರೆ ತಿಂಡಿ ತಿನ್ಸ್ ಗಳ ಕೊಡ್ದು. ಈಗನ ಪಾನಿ ಪೂರಿ, ಗೋಬಿಮಂಚೂರಿ, ಸಮೋಸ, ಬರ್ಗರ್, ಕೇಕ್ ಇಂತ ತಿನ್ಸ್ (Junk food)ಗಳ ಹೆಚ್ಚಾಗಿ ತಿಂಬೊದು ದೊಡ್ಡ ತೊಪ್ಪು. ಆಹಾರ ಹಿತ–ಮಿತ ಆಗಿದ್ದರೆ ಆರೋಗ್ಯವಂತರಾಗಿ ಇರಕ್. ಆಯುರ್ವೇದದ ಪ್ರಕಾರ ಷಡ್ರಸ ಬೋಜನನ ಅಬ್ಬೆಸ ಮಾಡ್ದು ಒಳ್ಳೆದ್. ಅಂದರೆ ಮಕ್ಕಳ ಆಹಾರಲಿ ಆರ್ ರಸಗ ಸಮಪ್ರಮಾಣಲಿ ಇರೊಕು. ಆರ್ ರಸಗ ಯಾ ರುಚಿಗಂತ ಹೇಳ್ರೆ – ಮಧುರ (ಸೀಂಯಿ) ಲವಣ (ಉಪ್ಪು) ಆಮ್ಲ (ಹುಳಿ) ಕಟು (ಕಾರ) ತಿಕ್ತ (ಕಂಯಿ) ಕಷಾಯ (ಒಗರ್). ಮಕ್ಕಳಿಗೆ ಬರೇ ಸೀಂಯಿನೇ ಅಬ್ಬೆಸ ಮಾಡಿಕೆ ಆಗದ್. ಹಂಗೇ ಬೆರೀ ಚಪ್ಪನೋ, ಹುಳಿನೋ ಕೊಡಿಕೂ ಆಗದ್.

"ಸಮದೋಷ ಸಮಾಗ್ನಿಶ್ಚ ಸಮಧಾತು ಮಲಕ್ರಿಯ ।
ಪ್ರಸನ್ನ ಆತ್ಮ ಇಂದ್ರೀಯ ಮನ ಸ್ವಸ್ಥ ಇತ್ಯಭಿದೀಯತೇ।"

ನಮ್ಮ ಸೈರದ ಮೂರು ದೋಸಗಳ ಸಮತೋಲನ, ಸಮಾಗ್ನಿ, ಜಠರಾಗ್ನಿ, ಅಥವಾ ಸೆರಿಯಾದ ಜೀರ್ಣ ಪ್ರಕ್ರಿಯೆ ಸಪ್ತಧಾತುಗಳ ಸಮತೋಲನದ ಜೊತೆಗೆ ಆತ್ಮ, ಪಂಚ ಇಂದ್ರೀಯ ಮತ್ತೆ ಮನ್ಸ್ ನ ಆರೋಗ್ಯನೂ ಸಂಪೂರ್ಣಾಗಿ ಹೊಂದಿರ್ದರ "ಸ್ವಸ್ಥ"ಂತ ಹೇಳುವೆ. ಹಂಗಾಗಿ ನಾವು ಸ್ವಸ್ಥ ಮನ್ಸ್‌ಂದ ಒಳ್ಳ ವಿಚಾರಗಳ ತಕಂಡ್ ನಮ್ಮ ಮಕ್ಕ ಸ್ವಸ್ಥ ಇರುವಾಂಗೆ ನೋಡಿಕಣನೊ.

---

**ಡಾ: ನಿವೇದಿತಾ ಎ.ಪಿ.**
ಖಃಇಃಂ ವೈದ್ಯರು, ಸ್ವಸ್ಥ ಆಯುರ್ವೇದ,
# 131, 8 ನೇ ಕ್ರಾಸ್, ಎಂ.ಸಿ.ಇ.ಸಿ. ಹೆಚ್.ಎಸ್ ಬಡಾವಣೆ,
ಶಿವರಾಮ ಕಾರಂತ ನಗರ,
ಬೆಂಗಳೂರು – 560077.
ಮೊ.ಸಂ. 7760873091.

# ಬನ್ನಿ ಓದೋಮ

ಈ ಸರ್ತಿ ಬನ್ನಿ ಓದೋಮ ಅಂಕಣಲಿ ನಾವ್ ಆಯ್ಕೆ ಮಾಡಿಕಂಡ ಪುಸ್ತಕ ಶ್ರೀನಿವಾಸ ವೈದ್ಯರ 'ಇನ್ನೊಂದು ಸಂತೆ' ಶ್ರೀನಿವಾಸ ವೈದ್ಯರ್ ಧಾರವಾಡದವು. ಅಲ್ಲೆ ಎಂ.ಎ. ಮುಗಿಸಿ, ಬ್ಯಾಂಕ್ ಎಕ್ಸಾಂ ಬರ್ದ್, ಕೆನರಾ ಬ್ಯಾಂಕ್‌ಗೆ ಕೆಲಸಕ್ಕೆ ಸೇರಿಕಂಡ. ತಮ್ಮ ಕೆಲಸದ ಹೊತ್ತ್‌ಲಿ ಆದ ಜೀವನ ಅನುಭವನ ಈ ಪುಸ್ತಕಲಿ ಬಾರಿ ಪೊರ್ಲುಲಿ ಬರ್ದೊಳೊ. ಇನ್ನೊಂದು ವಿಸೇಸ ಅವು ಬರೆಕೆ ಸುರು ಮಾಡ್ದ್ ಅವುಕೆ 60 ವರ್ಸ ಆದ ಮೇಲೆ. ತುಂಬಾ ತಡ ಆಗಿ ಬರೆಕೆ ಸುರು ಮಾಡ್ದೆ ಅಂತಾ ಲೇಖಕರ್ ತಮ್ಮ ಮಾತ್‌ಲಿ ಹೇಳಿಕಂಡವೆ. ಆದ್ರೆ ತುಂಬಾ ತಡ ಆಗಿ ಬರ್ದರೂ ಬರ್ದ ಪುಸ್ತಕಕ್ಕೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಇನಾಮು ಬಂದುಟು ಅಂತಾ ಹೇಳಿಕೆ ಹೆಮ್ಮೆ ಆದೆ. ನಮ್ಮ ಅರೆಬಾಸೆ ಜೆನಗ ಕೂಡ ಬದ್ಕ್ ಕಟ್ಟಿಕನಿಕ್. ಮೈಸೂರು, ಬೆಂಗಳೂರು ಇನ್ನ್ ದೂರ ದೂರದ ಊರಿಗೆ ಹೋದವ್ ಒಳೊ. ಅಲ್ಲಿ ಆದ ಅನುಭವನ್ ಹಿಂಗೆನೆ ಬರ್ದರೆ ಬಾಸೆಗೆ ಒಳ್ಳೆದ್ ಆದೆ ಎಂಬುದರ ಗೇನಲಿಟ್ಟ್‌ಕಂಡ್ ಈ ಪುಸ್ತಕನ ಪರಿಚಯ ಮಾಡ್ತಾ ಒಳೊ. ಶ್ರೀನಿವಾಸ ವೈದ್ಯರ ಇನ್ನೊಂದು ಸಂತೆ ಓದಿ ನಿಮ್ಮದೊಂದು ಸಂತೆ ಪುಸ್ತಕ ಬರ್ಲಿ. ಆಗ ಈ ಅಂಕಣದ ಉದ್ದೇಸ ಈಡೇರ್ದ ಹಂಗೆ ಆದೆ.

ಎರಡನೆಯ ಸಲ ದಬ್ಬಿಸಿಕೊಂಡು ಮರಳಿ ಮುಂಬಯಿಗೆ ಬಂದ ಮೇಲೆ ನನಗೆ ಸ್ವಲ್ಪ ಸ್ವಲ್ಪ ಜ್ಞಾನೋದಯವಾಗತೊಡಗಿತು. ಕೊಂಕಣಿ ಹುಡುಗರು ನಿಜವಾಗಿಯೂ ಕಷ್ಟಾಳುಗಳೂ, ಚಾಣಾಕ್ಷರೂ, ಏನನ್ನಾದರೂ ಸಾಧಿಸುವ ಛಲವುಳ್ಳವರೂ ಬದುಕುವ ವಿದ್ಯೆ ಬಲ್ಲವರೂ ಆಗಿರುತ್ತಾರೆಂದು ಕಂಡುಕೊಂಡೆ.

ದೂರದ ಗೋರೆಗಾಂವದ ಬಹುಮಹಡಿ ಕಟ್ಟಡದ ಮೆಟ್ಟಲು ಕೆಳಗಿನ ಒಂದಿಷ್ಟು ತ್ರಿಕೋಣಿ ಕೋಣೆಯಲ್ಲಿ ನಾಲ್ಕು ಜನ ಅನ್ನ ಬೇಳೆ ಬೇಯಿಸಿ ತಿಂದು ಬ್ಯಾಂಕಿಗೆ ಬರುತ್ತಿದ್ದವರನ್ನ ಕಂಡೆ. ಬಾಂದ್ರಾದಿಂದ ಬೆಳಗಿನ ಏಳರ

ಲೋಕಲ್ ಟ್ರೇನಿನಲ್ಲಿ ಓಡೋಡಿ ಬಂದು, ಬ್ಯಾಂಕಿಗೆ ಸನಿಹದ ಭಾರತೀಯ ವಿದ್ಯಾಭವನದ ಕಾಲೇಜಿನಲ್ಲಿ ಕ್ಲಾಸುಗಳನ್ನು ಮುಗಿಸಿ ಬ್ಯಾಂಕಿನ ವೇಳೆಗೆ ಸರಿಯಾಗಿ ಧಾವಿಸಿ ಹಾಜರಾಗುತ್ತಿದ್ದ ಸಂಜೀವ ಕಾಮತರುಗಳನ್ನು ಕಂಡೆ. ಸಂಜೆ ಆಫೀಸು ಬಿಟ್ಟ ನಂತರ ಓಡೋಡಿ ಹೋಗಿ ತಮ್ಮ ಸೋದರಮಾವನ ಅಂಗಡಿಯಲ್ಲಿ ಪೊಟ್ಟಣ ಕಟ್ಟುತ್ತ ನಿಂತ ವಾಮನ ಪೈಯನ್ನು ಕಂಡೆ. ಆಫೀಸಿಗೆ ಒಂದಿಷ್ಟು ಬೇಗ ಬಂದು ಹೋಗಿ ಒಂದೆರಡು ಟ್ಯೂಷನ್ ಹೇಳಿ ನಾಲ್ಕು ದುಡ್ಡು ಗಳಿಸುತ್ತಿದ್ದ ವಾಸುದೇವ ಕುಡ್ವರನ್ನು ಕಂಡೆ.

ಅವರಿಂದ ಇವರು ಕಲಿತರೋ, ಇವರಿಂದ ಅವರೋ ಎಂಬಂತೆ; ಬದುಕಿನ ಆಟದಲ್ಲಿ ಎಂದಿಗೂ ಸೋಲ ಬಾರದೆಂಬ ಛಲದಿಂದ ಗೆಲುವಿಗೆ ಧಾವಿಸುತ್ತಿದ್ದ; ಅನಂತ ಭಟ್, ನರಸಿಂಹ ಆಚಾರ್, ಗೋಪಾಲ ಸುವರ್ಣ, ಆನಂದ ಪೈ, ಸರ್ವೋತ್ತಮ ನಾಯಕ, ಐತಪ್ಪ ಶೆಟ್ಟಿ, ಸುಬ್ಬಣ್ಣ ಮೊಗವೀರ, ಧರ್ಮಾ ಶೆಟ್ಟಿ, ರೋಹಿದಾಸ್ ಶೆಣೈ, ಆಲ್ಬರ್ಟ್ ಪೈಸ್, ಆದಿಯಾಗಿ ಒಬ್ಬರಿಗೊಬ್ಬರು ಕೈಕೋಲು (Baton) ದಾಟಿಸುತ್ತ ರಿಲೇ ರೇಸಿನಲ್ಲಿ ಯಾವಾಗಲೂ ಮುಂಚೂಣಿಯಲ್ಲಿರುತ್ತಿದ್ದ ಇಡೀ ದಕ್ಷಿಣ ಕನ್ನಡ ಜಿಲ್ಲೆಯನ್ನು ಕಂಡೆ.

ಇವರಂತೆ ನಾನೂ ಆಗಬೇಕೆಂದು ಹಂಬಲಿಸತೊಡಗಿದೆ. ಪ್ರಯತ್ನಿಸತೊಡಗಿದೆ. ಈ ಅವಧಿಯಲ್ಲಿ ಮನಸ್ಸಿಟ್ಟು ಕೆಲಸ ಕಲಿಯತೊಡಗಿದೆ. ಕೊಂಕಣಿ ಮಾತಾಡಲು ಕಲಿತು ಸಂಪೂರ್ಣ ಕೊಂಕಣಿಯಾಗಿದ್ದೆ. ಮುಂಬಯಿಯ ಇತರ ಭಾಷೆಗಳನ್ನು ಕಲಿಯತೊಡಗಿದ್ದೆ. ಎಲ್ಲಕ್ಕೂ ಮುಖ್ಯವಾಗಿ ಕೈಯಲ್ಲಿ ಪೆನ್ಸಿಲ್ ಹಿಡಿದು ಪುಟಗಟ್ಟಲೆ ಅಂಕಿಗಳ ಟೋಟಲ್ ಮಾಡಲು ಕಲಿತಿದ್ದೆ.

# ಕಾರ್ತಿಂಗ ಸುರು ಆಕನ...!!!

ಮಳೆಗಾರ ಸುರು ಆವುಟು...
ಜರಿ ಮಳೆ ಬರ್ತಾ ಉಟ್ಟು...
ಕೊಡೆಗ ಎಲ್ಲೆಲ್ಲೋ ಬಿದ್ದುಟು...
ತಲೆಗೆ ಹಾಕುವ ಪ್ಲಾಸ್ಟಿಕ್‌ಗ
ಹರ್ದು ಹಾಳಾಗುಟು...

ಎಲ್ಲವರ ಕಾಫಿ ತೋಟಕ್ಕೆ ಗೊಬ್ಬರ ಹಾಕಿ ಮುಗ್ದುಟು...
ಗದ್ದೆ ಹೂಡಿ ಬೀಜ ಹಾಕುವ ಸಮಯ ಬಂದುಟು...
ಕಾರ್ತಿಂಗ ಸುರು ಆಗಿ ಮನೆವು ಎಲ್ಲ
ಒಟ್ಟಿಗೆ ಸೇರುವ ಟೈಮ್ ಬಾತ್
ಕೂಗಲಿಟ್ಟ್, ಕಣಲೆ, ಕಾರ್ತಿಂಗಳ ವಿಶೇಷ ಗಮ್ಮತ್ತ್...

ತೋಡುಗ ಯಾಗ ತುಂಬಿದೆತ ಗೊತ್ತ್‌ಲ್ಲೆ
ಹೊರಗೆ ಹೋಗಿ ಬಾಕನ ಆದ ಚಳಿ ಇನ್ನೂ ಬುಟ್ಟತ್ಲೆ
ಇನ್ನೇನು ಮಾಡ್ದು ಕಂಬಳಿ ಹೊದ್ದು ಮಲ್ಗುದು
ಒಲೆ ಬುಡಲಿ ಕುದ್ದ್, ಹಲಸಿನಕ್ಕ, ಗೇರ್‌ಬೀಜ ಸುಡ್ದು
ತೋಡುಲಿ ಮೀನ್‌ಗ ಹತ್ತಿಟು

ಕಾಡುಲಿ ಜಲ ಏಳಿಕೆ ಸುರು ಆವುಟು
ಪಣಪುಳಿ ಬಿದ್ದುಟು ಎಸೆಂಡ್ ಕಾಂಬಕೆ ಸುರು ಆವುಟು
ಹಲಸಿನ ಹಣ್ಣ್ ಕರಗಿ ಹಾಳಾಗಿಟು...

ತಂಪಾದ ಗಾಳಿ ಬೀಸ್ತಾ ಉಟ್ಟು
ಗಾಳಿ ಬೀಸುಕನ ಗಿಡಮರ ಬಾಗಿ
ಎಲೆಗ ಉದುರ್ತಾ ಉಟ್ಟು
ಗುಡುಗು ಜೋರಾಗಿ ಬಾಕನ ಹೆದರಿಕೆ ಆದೆ...
ಅಲ್ಲಲ್ಲಿ ಸುಮಾರ್ ಅಳುಂಬು ಎದ್ದದೆ

Current ಹೋದರೆ ಎಲ್ಲವರ
Mobile Switch off ಆದೆ
ಮಾವಿನ ಹಣ್ಣ್ ಬೀಳ್ತಾ ಉಟ್ಟು
Butter Fruit ಹಣ್ಣಾದೆ
ಮಳೆ ಜೋರಾಗಿ ಬಂದದೆ
ಇದೆಲ್ಲಾ ಮುಗಿಯಕನ ಕಾರ್ತಿಂಗ ಮುಗ್ದ್
ಆಟಿ ತಿಂಗ ಸುರು ಆದೆ.

**ದರ್ಶನ್ ಕೋಳಿಮಾಡು**

# ಗೌಡ ರೈತನ ದಿನಚರಿ

ಅಪ್ಪ ಬೊಳಿ ಬುಡಿಕೆ ಮುಂದೆ ಏಳ್ದು ಗಡ
ಅಪ್ಪ ಎತ್ತ್‌ಗಳ ಹೊಡ್ಕಂಡ್ ಹೂಡಿಕೆ ಹೋತ್ತ್ ಗಡ
ಅಪ್ಪ ಗದ್ದೇನ ಹೂಡಿಕೆ ಸುರು ಮಾಡ್ತ್ ಗಡ
ಅವ್ವ ಹೊಡೆತ್ತ್‌ಗಳ್ಗೆ ಹುಲ್ಲ್ ತಕ್ಕಂಡ್ ಹೋತಗಡ

ಅಪ್ಪ ಕರ್ಯ, ಬಿಳಿಯತ್ತೇಳಿ ರಾಗ ಎಳ್ತ್‌ಗಡ
ಅಪ್ಪನ ರಾಗಕೆ ಎತ್ತ್‌ಗ ತಲೆಯೆತ್ತಿ ನಡ್ದೊಗಡ
ಅವ್ವ ಚಾಕನ ಎತ್ತ್‌ಗ ದೂರಂದ ಕಂಡೊಗಡ
ಅಪ್ಪನ್ ನೋಡ್ತ್‌ಗಡ, ಕತ್ತಲೆದ್ ಊಟ ಗ್ಯಾನಾತ್‌ಗಡ

ಅಪ್ಪ ನಿಲ್ಸ್‌ಕನ ಕರ್ಯ, ಬೆಳಿಯ ನಿತ್ತೊಗಡ
ಅವ್ವ ಅವುಕೆ ಬುಳ್‌ಗುಲ್ಲ್ ಹಾಕಿತ್ ಗಡ
ಅವು ಹುಲ್ಲ್ ತಿಂಬಕನ ಅವ್ವ ಹೇಳ್ತ್‌ಗಡ
ಕರ್ಯ, ಬೆಳಿಯನ ಜೋಪಾನ, ಆದಂಗೆ ಮನೆಗೆ ಬನ್ನಿ ಗಡ

ಅಪ್ಪಂಗೆ ಉಂಬಕೆ ಕಂಚ್‌ನ ಬಟ್ಲ್‌ಗಡ
ಅವ್ವಂಗೆ ಉಂಬಕೆ ಮಂಣ್‌ನ ಚಟ್ಟೆಗಡ
ಅಪ್ಪಂಗೆ ಉಂಬಕೆ ಕುಸಲಕ್ಕಿ ಗಂಜಿಗೆ ಕಯ್ಯಣಿ ಪೊಜ್ಜಿಗಡ
ಅವ್ವೆ ಪ್ಪಗ ಕೂಡಿ ಚೆಟ್ಟಿನ ಪೂಜಿ ಉಂಡೊಗಡ

ಕತ್ತಲಾಕನ ಅವ್ವ ಮನೆನ ಗುಡ್ಸಿ, ಸೆಗ್ಣಿನ್ನಿರ್ ಹಾಕಿತ್‌ಗಡ
ಅವ್ವ ಮೀದ್ ದೇವ್ರುಗೆ ದೀಪನ ಹೊತ್ತಿಸಿತ್ ಗಡ
ಅಪ್ಪ ಹೋಗಿ ಗುಡ್ಡ್‌ಲಿ ಮೀತ್‌ಗಡ, ಬಂದಂಗೆ ನಾಮ ಹಾಕಿತ್‌ಗಡ
ಮಕ್ಕೆಲ್ಲವೂ ಒಂದ್ ಬಂದ್‌ಲಿ ಬಂದ್‌ತ ಹೇಳ್ ಕಿದ್ದೊಗಡ

ಅಪ್ಪ ಹೇಳ್ತ್‌ಗಡ ಇಕ್ಕ್‌ನಂಗೆ, ಹೊಟ್ಟೆ ಇಸಿದೆತ ಹೇಳ್ತ್‌ಗಡ
ಅವ್ವ ಹೇಳ್ತ್‌ಗಡ, ಓಯಾ, ಸ್ವಲ್ಪ ನಿಲ್ಲಿ, ಆತ್‌ತೇಳ್ತ್‌ಗಡ
ಅವ್ವ ಮಾಡಿತ್ತ್‌ಗಡ, ಒಣಗಿಲ್, ಮಾಸ, ಪೊಕ್ಕಳ ರೊಟ್ಟಿಗಡ
ಅಪ್ಪ, ಅವ್ವನ ವಾರೆನೋಡ್ತ್‌ಗಡ ಉಪ್ಪಳ, ಅವ್ವ ಸಂಣ ನಗೆ ಬೀರ್ತೆಗಡ

**ಪಟ್ಟದ ಪ್ರಭಾಕರ್**
ಅವಂದೂರು 94490 35449

# ಜೀವನ ಚಕ್ರ

ಇಂದ್ ಎಲ್ಲಾ ಮನೆ ಮನೆಲೂ ಒಂದೇ ಕಥೆ
ಅಪ್ಪ-ಅಮ್ಮ ಮಾತ್ರ ಇರ್ದು ಅವರದೇ ವ್ಯಥೆ ।
ಮನೆ ಮನೆಗ ಆಗೊಳೊ ವೃದ್ಧಾಶ್ರಮ
ನೆನಪಾದೆ ಮಕ್ಕಳಿಗಾಗಿ ಪಟ್ಟ ಶ್ರಮ ॥

ಅಂದ್ ಮಕ್ಕಳ ಬೆಳ್ಸುವ ಓದ್ಸುವ ಚಿಂತೆ
ಮತ್ತೆ ಚಾಕ್ರಿ ಮದ್ವೆನ ಚಿಂತೆ ।
ಮಕ್ಕ ಎಲ್ಲಾ ಜೀವನಕ್ಕಾಗಿ ಚಾಕ್ರಿ ಸೇರಿ
ಹೋಗೊಳೊ ದೂರದ ಊರ್‌ಗಳ ಸೇರಿ ॥

ಅಪ್ಪ-ಅಮ್ಮಂಗೆ ಟಿ.ವಿ.ನೇ ಸಂಗಾತಿ
ಬ್ಯಾಸರ ಕಳಿಯಕೆ ಬ್ಯಾರೆ ಇಲ್ಲೆ ಗತಿ ।
ಕಣ್ಣ್ ಟಿವಿಲಿದ್ದದೆ, ಹತ್ರಲಿ ಮೊಬೈಲಿದ್ದದೆ
ಮನ್ಸ್ ಮಾತ್ರ ಮಕ್ಕ ಪೋನ್ ಮಾಡ್ವೊತ ಕಾಯಿತ್ತಿದ್ದದೆ ॥

ಮನೆಲಿ ಟಿ.ವಿ., ಫ್ರಿಡ್ಜ್, ವಾಷಿಂಗ್ ಮಿಷಿನ್ ಎಲ್ಲಾ ಉಟ್ಟು
ಬೇಕಾದ ನೆಮ್ಮದಿನ ಒಂದ್‌ನ ಬುಟ್ಟ್ ।
ತಮ್ಮ ಕಷ್ಟ ಸುಖಗಳ ಹೇಳಿಕಳಿಕೆ ಯಾರಿಲ್ಲೆ
ಎಲ್ಲಾ ನಡ್ದ್ ಹೋದೆ ಮೊಬೈಲ್ ಫೋನ್‌ಲೆ ॥

ನಿದ್ದೆ ಬಂದರೆ ಎಲ್ಲಾ ಮರ್ತ್ ಹೋದೆ
ನಿದ್ದೆ ಬಾರದಿದ್ದರ ಹಳೆದೆಲ್ಲಾ ಗ್ಯಾನ ಆದೆ ।
ಮನ್ಸನ ಜೀವನ ಇಷ್ಟೆ ತಾನೆ
ಹಸಿರೆಲೆ ಹಣ್ಣೆಲೆ ಆದು ಪ್ರಕೃತಿನ ನಿಯಮ ತಾನೆ ॥

**ಲಲಿತಾ ಕಟ್ರತನ**
ಗೌಳಿಬೀದಿ, ಮಡಿಕೇರಿ



# ಗೂಡೆನ ಬಾಳು

ಹತ್ತು ಜನರ ಒಟ್ಟು ಸೇರಿಸಿಕಂಡು
ಗೌಜಿನ ಮೊದುವೆ ನಡ್ದತಲ್ಲ ..
ಬಗೆ ಬಗೆನ ಗೈಪು ಪಾಯಸ
ಲಾಯ್ಕ ನಾ ಊಟ ಗಮ್ಮತ್ತು ಆತಲ್ಲ..

ಖುಸಿಲಿ ಗೂಡೆ ಗಂಡನ ಮನೆಗೆ
ತವರುನ ಬುಟ್ಟು ಹೋತಲ್ಲ...
ನಾಳೆನ ಬೊದ್ಕು ಲಾಯಿಕ್ಕಲಿ
ಇರಲಿಂತ ಹರಸಿದ ಹಿರಿಯರೆಲ್ಲ..

**ಶರಣ್ಯ ಕೋಲ್ಚಾರ್**
ಆಲೆಟ್ಟಿ ಗ್ರಾಮ
ಸುಳ್ಯ ತಾಲೂಕು
8762686355

ಕನಸುನ ಕಟ್ಟಿ ಮನಸ್ಸುನ ಬಿಚ್ಚಿ ಗೂಡೆ
ಖುಸಿಲಿ ಗಂಡನ ಮನೆಗೆ ಹೋತಲ್ಲ.
ಅತ್ತೆ ಮಾವ ಹೇಳ್ದರ ಕೇಳಿಕಂಡು
ಗೈದುಕಂಡು ನಡತೆಲಿ  ಬದುಕಿತಲ್ಲ...

ವರ್ಸಗ ಕಳೆದರು ಗೂಡೆನ ಬಾಳುಲಿ
ಮೊಳಕೆ ಚಿಗುರಿತೆಲೆ ಅಲಾ..
ಆಸ್ಪತ್ರೆ, ಡಾಕ್ಟರಗ  ಕೂಸು ಆದ್ಲೆ
ಅಂತ ಕೈ ಚೆಲ್ಲಿಯೇ ಬುಟ್ಟಲ್ಲ..



ಊರುನ ಜನರ ಮುರಿಯ
ಕೇಳಿ ಗೂಡೆ ನೋವು ಸಹಿಸಿಕಂತಲ್ಲ...
ಗಂಡನ ಕೆಬಿಗೆ ಯಾರೋ ಚಾಡಿ
ಪುಂಗಿ ಊದಿಯೇಬುಟ್ಟಲ್ಲ

ಗೂಡೆಗೆ ಗಂಡನ ಮನೆಲಿ ಹಂಗಿಸಿ
ಕಿರಿಕಿರಿ ಸುರಾತಲ್ಲ ತಡೆಯಕಾಗದೆ
ಮರುಟುಕಂಡು ತವರುಗೆ ಓಡಿ ಬಾತಲ್ಲ
ಗೂಡೆ ಬೇಡ ಅಂತ ಗಂಡ ಡೈವೋರ್ಸ್ ಕೇಳುತಲ್ಲ

ತವರುಲಿ  ಅಣ್ಣಂಗೆ ಮದುವೆನು ಆಗಿ
ಮನೆಗೆ ಅತ್ತಿಗೆ ಮನೆ ತುಂಬಿತ್ತಲ್ಲ..
ಬರಡಾದ ಬದುಕುನ ನೆನೆಸಿಕಂಡು
ಗೂಡೆ ದಿನ ದಿನ ಕೊರಗಿತಲ್ಲ..




# ಇಂಚು

**ಲೀಲಾ ದಾಮೋದರ**

ಮನೆ ಎದ್‌ರ್‌ನ ಗೇಟ್‌ನಕ್ಕಲೆ ಕುಂಯಿ ಕುಂಯಿತ ದೀನ ಸೊರಲಿ ಮರ್ಡುವ ಸಣ್ಣ ನಾಯಿಮೊರಿನ ನೋಡಿ ನಮ್ಮೊವ್ಕೆ ಮರ್ಕ ಉಕ್ಕಿ ಬಾತ್. ಮೆಲ್ಲನೆ ಅದರ ನೇಚಿಕಂಡ್ ಬಂದ್ ಒಂದು ಸಣ್ಣ ಪಿಂಜಾಣಿಲಿ ಹಾಲ್ ಇಸಿದೊ. ಹೊಟ್ಟೆ ಇಸಿ ಕಂಗಾಲಾದ ಮೊರಿ ಪಚ ಪಚ ಹಾಲ್ ನೆಕ್ಕಿತ್. ಪೇಟೆಗೆ ಹೋಕನ ನಮ್ಮ ಮನೆಂದ ಹಳ್ಳಾ ದೂರಲಿ ಎರ್ಡ್ ಸಣ್ಣ ನಾಯಿಮೊರಿಗಳ ನೋಡಿದ್ದೊ. ಬಾಕನ ಒಂದೇ ಮೊರಿ ಇತ್ತ್. ಅಲ್ಲೇ ಹಕ್ಕ್‌ಲೆ ಒಂದು ಸಣ್ಣ ಹರ್ಕ್‌ಲ್ ಪ್ಲಾಸ್ಟಿಕ್ ಚೀಲನೂ ಇತ್ತ್. ಯಾರೋ ಮೊರಿಗಳ ತಂದ್ ಇಲ್ಲಿ ಬುಟ್ಟು ಹೋಗೋಳಾ ಕಂಡದೆ ಎಂತ ಮೊನ್ಸರಪ್ಪತ ಗೇನ ಮಾಡಿಕಂಡ್ ಮನೆಗೆ ಬಂದೊಳೆಗ. ಆದರೆ ಹಳ್ಳಾ ಹೊತ್ತುಲಿ ಆ ಒಂಟಿ ಮೊರಿ ಮೊರ್ರ್ ಮರ್ಟ್ ನಮ್ಮ ಗೇಟ್‌ನಕ್ಕಲೆ ಬಂದಿತ್ತ್.



ಅದ್ ಹೆಣ್ಣ್ ಮೊರಿ. ಬೌಶ ಇನ್ನೊಂದು ಗಂಡ್ ಮೊರಿ ಇದ್ದಿರೊಕು. ಅದರ ಯಾರೋ ತಕಂಡ್ ಹೋಗೊಳೊ ಕಂಡದೆ. ಈ ಮೊರಿ ಅಂತೂ ಒಂಟಿ ಆಗಿಬುಟ್ಟುಟು. ಪಾಪ! ಅದ್ಕೆ ಏನಾರ್ ತಿಂಬಕೆ ಕೊಟ್ಟುಕಮ್ಮೊನೊ. ಹಿಞ್ಞ ಬಲ ಆದಮೇಲೆ ಎಲ್ಲಿಗಾರ್ ಓದ ನೋಡೊನೊತ ತೀರ್ಮಾನ ಮಾಡ್ದೊ.

ಅದ್ ಬೆರೀ ಸಣ್ಣ ಮೊರಿ. ಅದರ ನೋಡಿ ನಮ್ಮ ಮಗಳ್ ಅದರ ಸಿಕ್ಸ್ ಇಂಚ್‌ತ ಕರಿಯಕೆ ಸುರು ಮಾಡ್ತ್. ಕೊಟೆಗೆಂದ ಒಂದು ಹೆಡೆಗೆನ ತಂದ್ ಅದ್ಕೆ ದಪ್ಪಲಿ ಬಟ್ಟೆ ಮೊಡ್ಚಿ ಹಾಕಿ ಮೆತ್ತನೆ ಮಾಡಿ ಮೊರಿನ ನೇಚಿ ಅದರ್ಲಿ ಮಲ್ಗಿಸಿತ್. ಅಲ್ಲಿಂದ ಸುರು ಆತ್ ನಾಯಿಮೊರಿನ ಉಪಚಾರ!

ಮನೆ ಕೆಲ್ಸಕೆ ಬಾವ ಕರಿಯಮ್ಮ ಮಾಣೆನ ಬಂದ್ ಅದರ ನೋಡಿ ಹಾಂಗೆಲ್ಲ ಬೀದಿಲಿ ಇದ್ದ ನಾಯಿನ ಹಕ್ಕಲೆ ಸೇರ್ಸಿಕೆ ಆಗದ್. ಅದ್ಕೆ ಎಂತಾರ್ ಕಚ್ಚಿದ್ದರೆ ಅಪಾಯ ಅಲ್ಲನೋತ ನಮ್ಮ ತಲೆಗೆ ಹುಳು ಬುಟ್ಟತ್. ನಾವ್ಗೂ ರೇಬೀಸ್ ಅದ್ ಇದ್‌ತ ಏನೇನೋ ಮನ್ಸ್‌ಲಿ ಮೂಡಿ ಹೋತ್. ಹೇಂಗೆ ಅದರ ದಯದಾಕ್ಷಿಣೆ ಇಲ್ಲದೆ ಹೊರೆಗೆ ಹಾಕುದು? ಆ ಮೊರಿನ ನಾ ತಕಂಡ್ ಹೋಕೋತ ಕರಿಯಮ್ಮ ಕೇಳ್ತ್. ನೀ ಸಾಂಕುದಾದರೆ ತಕಂಡ್ ಹೋಗು. ಆದರೆ ಎಲ್ಲೆಲ್ಲಿ ಬುಡ್ದು ಬೇಡತ ಹೇಳ್ದೊ. ಅದ್ಕೆ ಸಾಂಕಿಕೆ ಬೇಡಾಗಿತ್ತ್. ಹಾಂಗಾಗಿ ಮೊರಿ ನಮ್ಮಲ್ಲೇ ಒಳ್ತ್.

ಮೊರಿನ ಬೆನ್ನ್ ಮೇಲೆ ಅಲ್ಲೆಲ್ಲ ರೋಮ ಉದ್‌ರಿ ಮಂಗಳ ಮಂಗಳ ಆತ್. ಇದರ ನೋಡಿ ನಮ್ಮ ಮಗಳ್ ಮೆಡಿಕಲ್ ಶಾಪ್ ಇರುವ ಗೆಳ್ತಿಗೆ ಪೋನು ಮಾಡಿ ಸಲಹೆ ಕೇಳ್ತ್. ಅದ್ ಅದರ ಹೊಟ್ಟೆಗೆ ಕೊಡಿಕೆ ಮಾತ್ರೆನ್ನೂ ಮೈಗೆ ಪೂಜಿಕೆ ಮುಲಾಮುನ್ನೂ ಹೇಳ್ತ್. ಮೊದ್ದುನ ಅಂಗ್‌ಡಿಗೆ ಹೋದ ಮಗಳ್ ಮಾತ್ರೆ ಮುಲಾಮುಗಳೊಟ್ಟಿಗೆ ಮೊರಿನ ಮೀಸಿಕೆ ಶಾಂಪುನ್ನೂ ಹಿಡ್ಕಂಡ್ ಬಾತ್. ಹಾಲ್‌ಲಿ ಮಾತ್ರೆನ ಹೊಡಿ ಮಾಡಿ ಹಾಕಿ ಕುಡಿಯಕೆ ಕೊಟ್ಟ್. ಮೈಗೆಲ್ಲಾ ಮುಲಾಮು ಪೂಜಿ, ಲಾಯ್ಕ್‌ಲಿ ಮೀಸಿ, ಹಳೆ ಟರ್ಕಿ ಟೌಲ್‌ಲಿ ಚೆಂಡಿ ತೆಗ್ದ್ ಹೆಡೆಗೆನ ಹಾಸಿಗೆಲಿ ಮಲ್ಗಿಸಿತ್.

ಮಾಣ್ದಿನನೂ ಇದೇ ಉಪಚಾರ ನಡ್ತ್. ಆದೊರೂ ಮಗಳಿಗೆ ಯಾಕೋ ಸಮ್ದಾನ ಇಲ್ಲೆ. ಅದ್ಕೆ ತಣ್ಣನೆ ನೀರ್‌ಲಿ ಮಿಯ್ದರೆ ಚಳಿ ಆದ್ದೆ, ಬಿಸಿನೀರ್ ಬೇಕುತೇಳಿ ನೀರೆಡಿಂದ ಬಾಲ್ದಿಲಿ ಬಿಸಿನೀರ್ ತಕಂಡ್ ಹೋಗಿ ಮೀಸಿಕೆ ಸುರು ಮಾಡ್ತ್. ಮೊರಿನ ನಡ್ಗಟ ನಿತ್ತತ್. ಹೀಂಗೆ ಒಳ್ಳೆ

ಊಟ ಉಪಚಾರ ನಡ್ದ್ ಒಂದು ಒಂದೂವರೆ ತಿಂಗ ಆಕನ ಮೊರಿ ಪುಡ್ಕನೆ ಆತ್. ಉದ್ರ್‌ದ್ ರೋಮದ ಜಾಗೆಲಿ ಹೊಸ ರೋಮ ಹುಟ್ಟಿ ಹೇಂಗೆ ಹೆಂಗೋ ಇದ್ದ ನಾಯಿ ನೋಡುವಾಂಗೆ ಆತ್. ನಾ ಒಮ್ಮೆ ಈ ನಾಯಿಮೊರಿ ಹಙ್ಙಸಾ ಪೊರ್ಲು ಇಲ್ಲೆತ ಹೇಳ್ದಕ್ಕೆ ಮಗಳ್ ನನ್ನಿ ಕೆರ್ಕ್ಸಿ ನೋಡ್ಡ್ ನೆನ್ಸಿರೆ ನೆಗೆ ಬಂದದೆ.

ಇನ್ನ್ ಮೊರಿಗೆ ಬುದ್ದಿ ಕಲ್ಸುವ ಗೌಜಿ ಹೇಳಿ ಸುಕ ಇಲ್ಲೆ. ನಾ ಸುರುಗೇ ಹೇಳಿದ್ದೆ ನಾಯಿಮೊರಿ ಮನೆ ಒಳೆಗೆ ಬಾಕೆ ಬೊತ್ತುತ. ಹಾಂಗಾಗಿ ಮೆಲ್ಲಂಗೆ ಜೋರು ಮಾಡಿ ತಿಣೆಗೆ ಹತ್ತ್‌ರ್ತಿ ನಾಯಿನ ಕೆಳೆಗೆ ಇಳ್ಸಿ ಇಳ್ಸಿ ಮನೆಗೆ ಹತ್ತುವ ಅಭ್ಯಾಸನ ಬುಡ್ಸಿ ಆತ್. ಇನ್ನ್ ಅದರ ತಿನಿನ ಬಟ್ಳ್‌ಗೆ ಹಾಕಿಕೆ ಮುಂದೆ ಬಾಯಿ ಹಾಕ್‌ತಿತ್ತ್. ಮಗಳಿಗೆ ಅದ್ ಸರಿಕಂಡತ್ಲೆ. ಪೂರಾ ತಿನ್ಸ್ ಹಾಕಿ ಆಕನ ಮುಟ್ಟ ಅದ್ ಸುಮ್ಮಗೆ ಕುದ್ರೊಕು. ತಿನ್‌ತೇಳ್ದ ಮೇಲೆ ಮಾತರ ತಿನೊಕುತೇಳುವ ಅಭ್ಯಾಸನ್ನೂ ಮಾಡ್ಸಿ ಆಡ್. ಈಗ ತಿಂಡಿ ತಕಂಹೋಕನ ಒಟ್ಟಿಗೆ ಓಡಿ ಬಂದೊರೊ ದೂರಲಿ ಕುದ್ದುಕಂಡದೆ. ತಿನಿತೇಳದಿದ್ದರೆ ಬಾಯಿ ಹಾಕ್‌ದ್‌ಲೆ. ಪಿಳಿಪಿಳಿ ಕಣ್ಣ್ ಬುಟ್ಟುಕಂಡ್, ಬಾಲ ಬೊದ್ದಂಡ್ ಮೋರೆನೇ ನೋಡ್ದೆ. ತಿನ್ ಇಂಚೂತೇಳ್ದ ಮೇಲೇ ಅದ್ ತಿಂಬತಿದ್ದದ್. ಇನ್ನ್ ಒಂದು ಎರ್ಡ್‌ಗೆ ಕೂಡಾ ಗೇಟ್‌ನ ಅಡಿಲಿ ಮೆಲ್ಲ ಹುಕ್ಕೆ ಹೊರೆಗೆ ಹೋಗಿ ಮುಗ್ಸಿ ಬಾತಿತ್ತ್. ಇದ್ ನಾವು ಕಲ್ಸಿಸ ಅಭ್ಯಾಸ ಅಲ್ಲ. ಅದಿಯೇ ಕಲ್ತ್‌ಕಂಡದ್.

ಒಂದು ದಿನ ಬೊಳ್ಪಿಗೆ ವಾಚ್‌ಮೇನ್ ಹೊರಗೆ ಹೊರ್‍ಲೊವು ಕಾಲ್‌ಗೆ ಜೋಡು ಹಾಕಿಕೆ ನೋಡ್ರೆ ಒಂದೇ ಉಟ್ಟು. ಇನ್ನೊಂದು ಎಲ್ಲಿತ ಅತ್ತ ಇತ್ತ ನೋಡ್‌ಕನ ಇಂಚುನ ಹೆಡೆಗೆ ಹಾಸಿಗೆಲಿ ಉಟ್ಟು! ಅಲ್ಲಿ ಹೋಗಿ ನೋಡ್‌ಕನ ಎಂತದ್? ಒಂದಲ್ಲ ಎರ್ಡ್ ಮೂರು ಒಂಟಿ ಮೆಟ್ಟ್‌ಗ ಒಳೊ. ಒಟ್ಟಿಗೆ ಹಿಟ್ಟ್‌ನ ಒಳ್‌ಂಗಿದ ಚೂರುಗ, ಎಲುನ ತುಂಡುಗ, ಕುಪ್ಪು ಮುಚ್ಚುಳುಗ ಎಲ್ಲ ಒಳೊ. 'ಇದ್ ಬೆರೀ ಕಂಜೂಸ್ ಇಂಚು. ಎಲ್ಲನೂ ತಕಂಡ್ ಹೋಗಿ ಇಸಿಕಂಡದೆ'ತ ತೀರ್ಪು ಹೇಳ್ತ್ ಮಗಳ್. ಆಗ ಅಪ್ಪ 'ಅದ್ಕೆ ಹಲ್ಲ್ ತೊರ್ಸಿದೆ. ಅಗಿಯಕೆ ಅದ್ ತಕಂಡ್ ಹೋದ್ದ್'ತ ಹೇಳ್ದೊ. ಆಗಿದ್ದು, ಆದರೆ ನಾಯಿಗಳಿಗೆ ಅದ್ ಒಂದು ಆಟತ ಕಂಡದೆ. ಎಷ್ಟೋ ಮನೆಗಲ್ಲಿ ನಾಯಿಗ ಮೆಟ್ಟ್‌ಗಳ ಎಲೆಲ್ಲೋ ಹೊತ್ತ್‌ಕಂಡ್ ಹೋಗಿ ಹಾಕಿವೆ. ಮನೆಗೆ ಬಂದ ನೆಂಟ್ರ್‌ಗಳ ಮೆಟ್ಟ್‌ನ ಕಚ್ಚಿ ಬಾರ್ ತುಂಡು ಮಾಡದೆ ಅವ್ಕೆ

ಸಮ್ಮಾನ ಇಲ್ಲೆ. ನೆಂಟ್ರ್‌ಗ ನಾಯಿಗೆ ಬೊಯ್ಯಕೂ ಆಗದೆ ಮನೆವ್ಕೆ ಏನೂ ಹೇಳಕೂ ಆಗದೆ ಬಾರ್ ತುಂಡಾದ ಜೋಡುನ ಹಾಕಂಡ್ ಎಂಟಿಕಂಡ್ ಹೋದು ಸಾಮಾನ್ಯ. ನಮ್ಮ ಇಂಚುನ ಈ 'ಸಂಗ್ರಹ' ಬುದ್ಧಿನ ಬುಡ್ಸಿಕೆ ನಾವ್ಗೆ ಆತೇಲೆ. ಮನೆ ಹೊರೆಗೆ ಇಸಿದ ಯಾದೇ ವಸ್ತು ಕಾಣದ್ದರೂ ನಾವು ಈಗ ಸುರೂಗೆ ಹೋಗಿ ನೋಡ್ದೇ ಇಂಚುನ ಹಾಸಿಗೆ ಹೆಡೆಗೆನ. ಹೆಡೆಗೆನ ಒಳೆಗೆ ಇಲ್ಲರೆ ಅಕ್ಕಪಕ್ಕಲಿ ಚಪ್ಲಿ, ಕೈ ಚೌಕ, ನೀರ್‌ನ ಕುಪ್ಪಿ ಹೀಂಗೆ ಏನೇನೋ ವಸ್ತುಗ ಸಿಕ್ಕಿವೆ.

ಈ ಮೊರಿನ ಯಾರಾರ್ ತಕಂಡ್ ಹೋಗಿದ್ದರೇತ ನಂಗೆ ಅನ್ಸ್‌ತಿ. ಇದ್ ಇನ್ನ್ ಮೊರಿ ಹಾಕಿ, ಕೊಟೆಗೆ ತುಂಬಾ ಮೊರಿಗ ತುಂಬಿಕಂಡ್ ಫಜೀತಿ ಆದೊಲೇತಾತ್. 'ನೀ ಯಾಕೆ ಚಿಂತೆ ಮಾಡಿಯ? ನಾಯಿ ಹಳ್ಳಾ ದೊಡ್ಡದಾಗಲಿ, ತೋಟಕ್ಕೆ ಕಳ್ಸೊನೊ. ಎಂಕಟ ನೋಡಿಕಂಬೊದು'ತ ಮನೆವು ಹೇಳ್ದೊ. ನಾಯಿ ಪಕ್ಕ ಬಲ ಆಗಲಿತೇಳಿ ಮೂರು ಹೊತ್ತೂ ತಿಂಬಕೆ ಕೊಡಿಕೆನಾನೂ ಸುರುಮಾಡ್ದೆ. ಈಗ ನಾಯಿ ನಾ ಅಂಗಳಕೆ, ಹಿತ್ಲ್‌ಗೆ ಹೋದರೆ ಒಟ್ಟಿಗೇ ಬಾಕೆ ಸುರು ಮಾಡ್ತ್. ನಾ ಅದರ ಮಾತಾಡ್ಸದೆ ಹೋದರೆ ಹಿಂದೆಂದ ಬಂದ್ ಬಿಟ್ರೆನ ಮೆಲ್ಲ ಕಚ್ಚಿ ಎಳಿಯತಿತ್ತ್. ತಿರ್ಗಿ ನೋಡ್ರೆ ಕುಂಯಿ ಕುಂಯಿತೇಳಿ ನೆಲಲಿ ಬಿದ್ದ್ ಹೊಣ್ಕ್‌ತಿತ್ತ್.

ಸಾದಾರ್ಣ ಆಗಿ ಎಲ್ಲಾ ಮೊನ್ಸರೂ ನಾಯಿಗಳೊಟ್ಟಿಗೆ ಇಂಗ್ಲಿಷ್ ಮಾತಾಡಿವೆ. ಕಂ, ಗೋ, ಜಂಪ್, ಕ್ಯಾಚ್, ಸಿಟ್ಟ್‌ತೇಳ್‌ಕನ ದಣಿನ ಕೈಬಾಸೆ ನೋಡಿ ಹಾಂಗೇ ಮಾಡಿವೆ. ಕಲ್ತರೆ ಯಾವ ಬಾಸೆ ಬಾದ್‌ಲೆ ಹೆಳಿ ನಾವ್ಗೆ ಈ ಮೊರಿ 'ಅರೆಬಾಸೆ' ನಾಯಿ ಆಗಿ ಬೆಳಿಯೊಕುತ ಇತ್ತ್. ನಾವು ಎಲ್ಲೊವೂ ಅದರೊಟ್ಟಿಗೆ ಅರೆಬಾಸೆ ಮಾತಾಡ್ತಿದ್ದೊ.

ಹೀಂಗಿರ್‌ಕನ ಒಂದು ದಿನ ಹಕ್ಕಲೆನ ಅಂಗ್‌ಡಿಲಿ ಸಾಮಾನ್ ಕಟ್ಟಿ ಕೊಡ್ತಿದ್ದ ಹೈದ ಮನೆಗೆ ಬಾತ್. 'ಈ ಮೊರಿ ನಮ್ಮ ಅಂಗಡಿಗೂ ಬಂದದೆ. ಮುನ್ನೂರು ನಾನೂರು ರುಪಾಯಿ ಯಾರೂ ಇದಕೆ ಕೊಡುವು'ತೇಳ್ತ್. ದುಡ್ಡುಗೆ ಹೋಗಲಿ, ಯಾರಾರ್ ಸಾಂಕಿನೆತೇಳ್ರೂ ನಾವ್ಗೆ ಈಗ ಮೊರಿನ ಕೊಡೊ ಮನ್ಸಿಲ್ಲೆ. ಒಂದು ಗಳ್ಗೆ ಅದ್ ಕಾಣಸ್ದರೂ ಕಣ್ಣ್ ಹುಡ್ಕಿದೆ. ಅದ್ ಈಗ ಬೊಳಿಕೆ ಕಲ್ತುಟು. ಒಂದು ಸಣ್ಣ ಸದ್ದ್ ಆದರೂ ಅದರ ಎಳೆ ಸೊರಲಿ ಬಿವ್ ಬಿವ್‌ತ ಬೊಗ್‌ಳಿದೆ. ದಾರಿಲಿ ಯಾರ್ ಹೋದರೂ ತೊದ್‌ಲೆ ಬೊಗಳಿಟ ಬೊಗ್‌ಳಿ 'ನಾ ಇಲ್ಲಿ ಮನೆ ಕಾಯಕೆ ಒಳೆ,

ಜಾಕುರ್ತೆ!'ತ ಎಚ್ಚ್‌ರ್ಕೆನ ರವಾನೆ ಮಾಡ್ದೆ. ಅನ್ನ ಕೊಟ್ಟೊಳೊ, ಆರಯಕೆ ಮಾಡಿಯೊಳೊ ಹೌದು. ಆದೊರೂ ಇದ್ ಸಣ್ಣ ಮೊರಿ, ಈ ಮನೆನ, ಈ ಮನೆವರ ಕಾಯುದು ತನ್ನ ಕರ್ತವ್ಯತ ನಡ್ಕೇಡದೆಲೆ ಇದ್ ಎಂತ ಪ್ರಕೃತಿ ವಿಶೇಷ ಅಲ್ಲ...!?

ಪಳಪಳ ಹೊಳಿವ ಕಂದ್ ಬಣ್ಣದ, ಹಣೆಲಿ ಎದ್ದ್ ಕಾಂಬ ಬೆಳ್ಳಗಿನ ನಾಮದ, ಸುಟಿ ಸುಟಿ ಆಗಿ ಓಡ್ಯಾಡಿಕಂಡ್ ಆಗಾಗ ಬಾಲಬಾಸೆಲಿ ಬೊಗ್ಳಿ ಕಂಡ್ ಇರುವ ನಮ್ಮ ಇಂಚು ಒಮ್ಮೆಂದೊಮ್ಮೆಗೇ ಕಾಣೆ ಆತ್! ಬೊಳ್ಪಿಗೆ ತಿಂಡಿ ಹಾಕ್‌ಕನ ತಿಂದುಟು. ಹೊತ್ತುಗೆ ಕಾಂಬೊದೇಲೆ. 'ಇಂಚೂ, ಇಂಚೂ'ತ ಕರೆ. ಉಹೂಂ... ಸುದ್ದಿ ಇಲ್ಲೆ. ಎಲ್ಲೋ ಆಚೆ ಹೋಗಿರ್ದು. ಈಗ ಬಾದು, ಮತ್ತೆ ಬಾದುತ ಕಾದದೇ ಬಾತ್. ಒಂದು ದಿನ, ಎರ್ಡ್ ದಿನ ಕಳ್ದರೂ ಇಂಚುನ ಪತ್ತೆ ಇಲ್ಲೆ. ನಾವ್ಗೆಲ್ಲ ಆದ ಬೇಜಾರ್ ಅಷ್ಟಿಷ್ಟ್ ಅಲ್ಲ. ಪೇಟೆಗೆ ಅಲ್ಲಿ ಇಲ್ಲಿ ಹೋಕನ ಸಣ್ಣ ಕಂದ್ ಬಣ್ಣದ ಮೊರಿನ ನೋಡ್ರೆ ಇದ್ ನಮ್ಮ ಇಂಚು ಏನೋತ ಗ್ರೇಸ್‌ತಿದ್ದೆ. ಆದರೆ ಅದರ ಹಣೆಲಿ ನಾಮ ಇಲ್ಲದಂರ್ದ ಅದ್ ನಮ್ಮ ನಾಯಿ ಅಲ್ಲತ ಗೊತ್ತಿತ್ತು. ಅಂಗ್‌ಡಿ ಹೈದ ಹೇಳ್ದ ಮಾತ್ ಆಗಾಗ ನೆನ್ಪಾತಿತ್ತ್. ಮುನ್ನೂರು ನಾನೂರು ರುಪಾಯಿಗೆ ಆ ಹೈದನೇ ಅವರ ಅಂಗ್‌ಡಿಗೆ ಹೋದ ಮೊರಿನ ಹಿಡ್ದ್ ಕೊಟ್ಟತೋ ಏನೋ! ನಾ ಹೀಂಗೆ ಹೇಳ್ಕನ ನಮ್ಮೊವು 'ನೋಡದೆ ಯಾರ ಮೇಲೂ ಏನೂ ಹಏಳಿಕೆ ಆಗದ್. ನಾವ್ಗೆ ಹೇಂಗೂ ಮೊರಿ ಬೇಡತ ಇತ್ತಲೆ. ಹೋದ್ದ್ ಒಳ್ಳದಾತ್ ಬುಡು'ತೇಳ್ದೊ. ಆದೊರೂ ಅದರ ಆಟ ತುಂಟಾಟ, ಪ್ರೀತಿ, ಅದರ ಹೆಡೆಗೆ ಹಾಸಿಗೆ, ಅದರ್ಲಿ ಅದ್ ಜೋಕೆ ಮಾಡ್ದ ಎಲುನ ತುಂಡುಗ, ಒಳ್‌ಂಗಿಲ್ ರೊಟ್ಟಿ, ಪ್ಲಾಸ್ಟಿಕ್ ಮುಚ್ಚುಳು... ಮುದ್ದು ಕಂಜೂಸು ಮೊರಿ! ಇದ್ದದ್ ಎರ್ಡೂವರೆ ಮೂರು ತಿಂಗ ಮಾತರ. ಆದರೆ ತಿಂಗ ಬುಡಿ ವರ್ಸಗ ಕಳ್ದರೂ ಮಾಸದ ನೆನ್ಪುನ ಇಂಚು ಕೊಟ್ಟು ಹೋಗುಟು.

---

**ಲೀಲಾ ದಾಮೋದರ**

'ಧಾತ್ರಿ', ವಲಯ ಅರಣ್ಯ ಕಛೇರಿ ಹತ್ತಿರ, ಗಾಂಧಿನಗರ, ಸುಳ್ಯ – 574 239

ಮೊಬೈಲ್ : 9449451051

# ನಮ್ಮ ಕಾಲ್ ಮೇಲೆ ನಾವ್ ನಿಲ್ಲೊಕು!

## ಕೊಟ್ಟಕೇರಿಯನ ಲೀಲಾ ದಯಾನಂದ

ನಾವ್ ಸಣ್ಣದಿರ್‌ಕನ ಇಸ್ಕೂಲ್‌ಂದ ಬಂದ್ ಕುಂಟಬಿಲ್ಲೆ, ಲಗೋರಿ ಹಿಂಗೆ ಎಂತೆಲ್ಲೋ ಆಟಾಡಿಕಂಡಿರ್‌ತಿದ್ದೊ. ತಲೆ ಮೇಲೆ ಸೌದೆ ಹೊರೆನ ಹೇರಿಕಂಡ್ ಬೆವರಿಳ್‌ಸಿಕಂಡ್ ಬರ್ತಿದ್ದ ಚ್ಯಾಮೆವ್ವ ನಮ್ಮನ ನೋಡಿ, “ಆಟ ಬುಟ್ಟು ಲಾಯ್‌ಕ್‌ಲಿ ಓದಿಕಣಿ ಮಕ್ಕಳೇ, ನೀವೆಲ್ಲಾ ನನ್ನಂಗಾಕೆ ಬೊತ್ತ್. ನಿಮ್ಮ ನಿಮ್ಮ ಕಾಲ್ ಮೇಲೆ ನೀವು ನಿತ್ತ್‌ಕಂಡ್ ತೋರ್‍ಸಿ”ತ ಹೇಳ್‌ತಿದ್ದ ಮಾತ್ ಈಗೊಳೂ ಕೆಮಿಲಿ ಗುಂಯ್‌ಗುಟ್ಟದೆ. ಆಗೆಲ್ಲಾ ಮಕ್ಕಳಾಟಿಕೆಲಿ “ಅಲ್ಲವ್ವಾ, ಈಗೇನ್ ನಿನ್ನ ಕಾಲ್ ಮೇಲೆ ನಾವ್ ನಿತ್ತೊಳನಾ ನಿಂದೊಳ್ಳೆ ಕುಸಾಲು’ತ ಕಿಚಪಿಚಾತ ನಗಾಡ್‌ತಿದ್ದೊ. ಆದರೆ ಬುದ್ಧಿ ಬೆಳ್‌ದಂಗೆ, ಪ್ರಪಂಚನ ಕಣ್ಣರ್‌ಳಿಸಿ ನೋಡ್‌ತಿದ್ದಂಗೆ ಚ್ಯಾಮೆವ್ವ ಅಂದ್ ಹೇಳ್‌ದ ಮಾತ್ ಅದೆಷ್ಟ್ ದೊಡ್ಡ ಉಪದೇಸಾತ ಹೇಳ್‌ದು ಅನುಭವಕೆ ಬಾತ್. ಪಂಡ್‌ಲಿ ನನ್ನ ಚ್ಯಾಮೆವ್ವ ಆಸೆ ಇಸಿದಂಗೆ ಇಂದ್ ನಾ ನನ್ನ ಕಾಲ್ ಮೇಲೆ ನಿತ್ತದನ ಅವ್ವಂಗೆ ತೋರ್‌ಸೊಕೂತ ಹೇಳ್ರೆ, ನೋಡಿಕೆ ಅವಳೇ ಇಲ್ಲೇತೇಳ್ವ ಕೊರ್‌ಗ್ ನನ್ನ ಕಾಡ್‌ತಾನೇ ಉಟ್ಟ್.

ಮೊಲೆ ಉಂಬ ಕೂಸು ಮಡ್ಲ್‌ಂದ ಕೆಳಗಿಳಿಯಕೆ ಮುಂದೆನೇ ಹೇಳದೇ ಕೇಳದೇ ಸ್ವರ್ಗ ಸೇರ್‌ದ ನಮ್ಮ ಚಾಂಪ ತನ್ನ ಹೆಣ್ಣ್‌ನ ನಡುನೀರ್‌ಲಿ ಬುಟ್ಟು ಹೋಗಿತ್ತ್. ಆಗಷ್ಟೇ ಲೋಕನ ಪಿಳಿಪಿಳಿ ಕಣ್ಣ್ ಬುಟ್ಟು ನೋಡ್‌ತಿದ್ದ ಹಸುಗೂಸುಗಳ್‌ನ ಬೆಳ್‌ಸಿ ಒಂದ್ ನೆಲೆ ಕಾಣಿಸಿಕೆ ಪಡಿಕಾಗದ ಪಾಡ್ ಪಟ್ಟಿತ್ತ್ ನಮ್ಮ ಚ್ಯಾಮೆವ್ವ. ಸಮಾಜದ ಕೆಟ್ಟ ದೃಷ್ಟಿಗಳ್‌ಂದ ತಪ್ಪ್‌ಸಿಕಂಡ್, ಇದ್ದ 2–3 ಎಕರೆ ಜಾಗೆಲಿ ಕಾಪಿ, ಯಾಲ, ಮೆಣ್‌ಸ್, ತರಾವರಿ ಹಣ್ಣ್–ಹಂಪಲ್‌ಗಳ್‌ನ ಎದೆ ಹೊಡಿ ಮಾಡಿಕಂಡ್ ಬೆಳಸಿ ಕೈಗೆ ಮೂರು ಕಾಸ್ ಬಾಕನ ಸ್ವರ್ಗ ಸಿಕ್ಕಿದಷ್ಟೇ ಕುಸಿ. ಹಿಂಗೆ ಬಂಜಲಿ ಬದ್‌ಕಿತ್ತ್ ನಮ್ಮವ್ವ.

ಎಲ್ಲವ್ಕೂ ಅಲ್ಲದಿದ್ದರೂ ಹೆಚ್ಚಿನ ಗೂಡೆಗಳ್‌ಗೆ ಮೊದುವೆಗೆ ಮುಂದೆ ಇದ್ದ ಆಸೆಗಳನ, ಅಭಿರುಚಿಗಳ್‌ನ, ಹವ್ಯಾಸಗಳ್‌ನ ಕೈ ಬುಡಕಾದ ಪರಿಸ್ಥಿತಿ ಬಂದದೆ. ಹುಟ್ಟಿದ ಮನೆಗೂ, ಮೆಟ್ಟಿದ ಮನೆಗೂ ಬಾರೀ ವ್ಯತ್ಯಾಸ ಇದ್ದದೆ.

(ಅದೃಷ್ಟ) ಪೊಲ್ಸು ಲಾಯ್‌ಕಿದ್ದರೆ ಅವಳ ಭಾವನೆಗಳಿಗೆ ಬೆಲೆ ಸಿಕ್ಕುವಂತ ಮನೆ ಸಿಕ್ಕಿದೆ. ಇಲ್ಲದಿದ್ದರೆ ಆಸೆಗಳ್‌ನೆಲ್ಲಾ ಅಮುರ್‌ಸಿಕಂಡೇ ಬಾಳುದು ಅನಿವಾರ್ಯ ಆದೆ.

ನನ್ನ ಒಬ್ಬ ಸಿನೇತೆ ಪಟ್ಯೇತರ ಚಟುವಟಿಕೆಗಳ್‌ಲಿ ಬಾರೀ ಚುರುಕಾಗಿತ್ತ್. ಹೆತ್ತವು ಅವಳ್‌ನ ಆಸ್ತಿಗಾರಂಗೆ ಮೊದುವೆ ಮಾಡಿ ಕೊಟ್ಟೊ. ಉಂಬಕೆ ತಿಂಬಕೆ ಏನೂ ಕಮ್ಮಿಯಿಲ್ಲದೆ ಹೋದರೂ, ಅವಳ ಆಸಕ್ತಿಗಳ್‌ಗೆ ನಯಾ ಪೈಸೆ ಒತ್ತಾಸೆ ಸಿಕ್ಕದೆ "ಉಪ್ಪು–ಹುಳಿ" ಇಲ್ಲದ ಬೊದ್ಕ್‌ನ ನಡ್‌ಸ್‌ತಾ ಉಟ್ಟ್. ನನ್ನ ಕಾಂಬಕನೆಲ್ಲಾ, 'ನಿನ್ನಂಗೆ ನಾನೂ ನಾಕ್ ಕಾಸ್ ಸಂಪಾದನೆ ಮಾಡಕಾಗಿತ್ತ್. ಗಂಡನತ್ರ ಎಷ್ಟೇ ದುಡ್ಡಿದ್ದರೂ ಪ್ರತಿಯೊಂದಕೂ ಕೈಚಾಚಿ ಕೇಳ್ದೇ ದೊಡ್ಡ ಹಿಂಸೆ. ಒಪ್ಪದ ಸೀರೆ ಒಂಬತ್ತಿದ್ದರೇನ್? ಚಾಕ್ರಿಲಿದ್ದಿದ್ದರೆ ನನ್ನತನನ ಉಳ್‌ಸಿಕಂಡ್ ನಾ ಬೊದ್‌ಕಕಾಗಿತ್ತ್'ತ ಹೇಳಿಕಂಡ್ ಸೆರಗ್‌ನ ಕಣ್ಣಿಗೆ ಇಸಿದೆ.

ಬೊದ್‌ಕ್‌ಲಿ ಅದೆಷ್ಟೋ ಜವಾಬ್ದಾರಿಗಳ್‌ನ ನೀಸ್‌ವ ಒಂದ್ ಹೆಂಗ್‌ಸ್ ಅವಳ ಸ್ವಂತಕೇತೇಳಿ ಹನಿಯಾದರೂ ಸಮಯ ಮಾಡಿಕಣೊಕು. ನಮ್ಮತನನ ಕಾಪಾಡಿಕಂಡ್ ಬಾಳ್‌ರೆ ಸಾರ್ಥಕತೆ ಇದ್ದದೆ. ದುಡಿಯೊದು – ತಿಂಬೊದು ಹಿಂಗೆ ಎರಡೇ ಮಾಡಿಕಂಡಿದ್ದರೂ ಸನ ಆಯಸ್ಸ್ ಮುಗ್‌ದದೆ. ಎಷ್ಟೇ ಬೇಜಾರಿದ್ದರೂ, ನಿರಾಸೆಗ ಇದ್ದರೂ ಹೆಚ್ಚಿನ ಹೆಣ್ಣ್ ಮಕ್ಕ ಸಮಾಜಲಿ ಮರ್ಯಾದೆಗೆ ಅಂಜಿಕಂಡ್ ಅವರ ಕನ್ಸ್‌ಗಳ್‌ನ ಮಣ್ಣ್ ಮಾಡಿಕಂಡೇ ದಿನ ಕಳ್‌ದವೆ. ಗಂಡ ಬುಟ್ಟವಳೂತ ಹೇಳ್‌ಸಿಕಂಬ ಹೆದ್‌ರಿಕೆ ಒಂದಾದರೆ, ಸ್ವಂತ ಸಂಪಾದನೆ ಇಲ್ಲದಿರ್‌ದೂ ಇದ್‌ಕೆ ಮುಖ್ಯ ಕಾರಣಾದೆ. ಇದ್ದೂ ಸತ್ತಂಗೆ ಬದ್‌ಕುವ ಅದೆಷ್ಟೋ ಹೆಣ್ಣ್‌ಮಕ್ಕ ಈ ಸಮಾಜಲಿ ಒಳೊ. ಅದ್‌ಕೇ ಹೆಳ್‌ದು 'ಭಾರತ ದೇಸಲಿ ಹೆಣ್ಣ್ ಮಕ್ಕ ಬಾಳ್‌ದು ಒಲವಿಂದಲ್ಲ, ಛಲಂದ'ತ!

ಮಾತಾಡವು ನಾವ್ ಹೆಂಗಿದ್ದರೂ ಮಾತಾಡ್‌ವೆ. ಹಂಗೇತೇಳಿ ಎಲ್ಲದಕೂ ಬೇರೆಯವರ ಮಾತಿಗೂ ಕೆಮಿನೂ, ಬೆಲೆನೂ ಕೊಟ್ಟ್‌ಕಂಡೇ ಇದ್ದರೆ ನಾವು ನಾವಾಗಿ ಬಾಳಿಕಾದುಲೆ. ನನ್ನ ಪರಿಚಯಸ್ತ ಗೂಡೆಗೆ "ಕೋಶ ಓದಿಕೋ, ದೇಶ ಸುತ್ತಿಕೋ" ಬಾರಿ ಕುಸಿ. 'ಮೊದುವೆ ಮಾಡಿಕಂ ಮೇಲೆ ಏನಾರೂ ಮಾಡಿತ'ತೇಳ್ವ ಒಕ್ಕಣೆ ಹೆತ್ತವರ್‌ದ್. ಆ ಕನ್‌ಸ್ಗಣ್ಣ್‌ನ ಗೂಡೆ ಹಟಗಟ್ಟಿ ಓದಿ ಡಿಗ್ರಿ ತಕಂಬಕನ ಒಂದ್ ಹೈದನ ನೋಡಿ ಗಂಟಾಕಿಯೇ

ಬುಟ್ಟೊ, ಹಿರಿಯವ್. ಅಲ್ಲಿಗೆ ಕಾಲಿಟ್ಟಂಗೇ ಅವಳ ಯಾವ ಆಸೆನೂ ಅಲ್ಲಿ ಈಡೇರಿಕೆಲೇತ ಬಾರೀ ಬೇಗ ಅವಳಿಗೇ ಗೊತ್ತಾತ್. 'ಅಂಡೆಲಿ ಇಲ್ಲೆ, ಅಳ್‌ಗೆಲಿ ಇಲ್ಲೆ' ತೇಳ್ವ ಗಂಡ, ಎಲ್ಲದಕೂ ಮೊಕ ಸಿಂಡರ್ಸುವ ಅತ್ತೆ–ಮಾವ. ಒಲ್ಲಿ ತಲೆ ಮುಚ್ಚಿರೆ ಕಾಲ್ ಕಾಂಬತಿತ್ತ್,! ಹಂಜ ದಿನ ಕುಗ್ಗಿ ಹೋದರೂ ಕೊರ್‌ಗಿಕೊಂಡೇ ಕೂರದೆ 'ನನ್ನ ಹಣೆಬರನ ನಾನೇ ತಿದ್ದಿಕಣೆ'ತ ಗ್ಯಾನ ಮಾಡಿ ನಿರ್ಧರಿಸಿತ್. ಪಟ್ಟ್ ಹಿಡ್‌ದ್ ಒಂದ್ ಚಾಕ್ರಿಗೆ ಸೇರಿ ನಿಟ್ಟುಸ್‌ರ್ ಬುಟ್ಟತ್. ಕಲ್‌ತ ವಿದ್ಯೆಂದಾಗಿ ಅವಳ ಬೊದ್‌ಕ್ ಇಂದ್ ದಡ ಸೇರ್‍ಯುಟು. ಕಟ್ಟಿಕೊಂಡವನೂ ಉದ್ಧಾರ ಮಾಡಿ, ಮಕ್ಕಳ ಭವಿಷ್ಯನೂ ರೂಪಿಸಿಕಂಡ್, ಅವ್‌ಳಿಗೆ ಬೇಕಾಗಿದ್ದ ಕುಸಿನ, ಬೊದ್‌ಕ್‌ಲಿ ಕಂಡ್‌ಕೊಂಡುಟು. ಇಷ್ಟಾದರೂ ಅವಳ ಧೈರ್ಯದ ಬಗ್ಗೆ ಕೊಂಕು ಮಾತಾಡ್‌ವ ನಾಲ್‌ಗೆಗಳ್‌ಗೇನೂ ಕಮ್ಮಿ ಇಲ್ಲೆ. ಕಾಳೆಳಿಯುವವು ಎಲ್ಲಾ ಕಾಲಲೂ ಇದ್ದೇ ಇದ್ದವೆ!

ಹೆಸರ್‌ವಾಸಿ ಬೀಚೀ ಅವರ್‌ನ ಒಬ್ಬ ಕೇಳ್‌ದೆಗಡ "ಹೆಣ್ಣ್‌ನ ಎಲ್ಲಿ ಮುಟ್ಟ ಹೊಡಿಯಕ್?"ತ. ಅದ್‌ಕೆ ಅವು ಕೊಟ್ಟ ಉತ್ತರ ಬಾರೀ ಮಾರ್ಮಿಕ ಗುಟ್ಟ್. "ಆ ಹೆಣ್ಣ್ ತಿರ್‌ಗಿ ಹೊಡಿಯಕೆ ಮುಟ್ಟ"ತೇಳ್ವ ಅವರ ಉತ್ತರ ನೋಡಿಕೆ ಕುಸಾಲು ಕಂಡರೂ, ಅದರ ಒಳಾರ್ಥ ಬಾರೀ ಅಡಿಲುಟ್ಟು. ಎಷ್ಟೋ ಮನೆಗಳ್‌ಲಿ ಹೆಣ್ಣ್‌ನ ಕೀಳಾಗಿ ಕಾಂಬೊದೂ, ಅವಮಾನ ಮಾಡ್‌ದೂ ಅವರ ಗಂಡಸ್ತನಾತ ತಿಳ್‌ಕಂಡಿದ್ದವೆ. ಹೆಣ್ಣ್ ಚಾಕ್‌ರಿಲಿದ್ದ್, ಸಂಪಾದನೆ ಅವಳ ಕೈಲಿದ್ದರೆ ಇಂತ ಮನಸ್ಥಿತಿನ ಮನ್‌ಸರ ಸೈರಿಸ್‌ಕಂಡ್ ಬೊದ್‌ಕುವ ತಾಕತ್ತ್ ತಾನೇ ತಾನಾಗಿ ಬಂದದೆ.

ಮನೆಲಿರ್‌ವ ಹೆಣ್ಣ್‌ಮಕ್ಕ ಇಡೀ ದಿನ ಮನೆಕೆಲ್‌ಸನೆಲ್ಲಾ ಎಷ್ಟೇ ಪೊರ್ಲುಲಿ ನಿಬಾಯಿಸಿರೂ, ಅಚ್‌ಕಟ್ ಮಾಡಿಸಿರೂ ಸನ ಗಂಡನ ಬುಡಿ, ಮಕ್ಕಳೂ ಮನೆಗೆ ಬಂದಂಗೆ ತಿಂಬಕೆ ಬೇಕಾದಂಗೆ ಕಾಂಬದಿದ್ದರೆ "ನೀ ಮನೆಲೇ ಕುದ್ದ್‌ಕಂಡ್ ಅದೆಂತ ಗುಡ್ಡ ಕಡ್‌ದ?"ತ ತಾತ್ಸಾರಲಿ ಕೇಳ್‌ದು ಮಾಮೂಲಿ. ಯಾವ್‌ದೇ ತಕರಾರಿಲ್ಲದೆ ಗಾಣದೆತ್ತ್‌ನಂಗೆ ದುಡ್‌ದದರ ಬೆಲೆ ತಿಳ್‌ಕಂಡ್, ಬೆಲೆ ಕೊಡುವವು ಬಾರೀ ಅಪರೂಪತ ಹೇಳಕ್.

ನಮ್ಮಲ್ಲಿಗೆ ಹೂ–ಸೊಪ್ಪುನ ಮಾರಿಕಂಡ್ ಬಾವ ಹೆಂಗ್‌ಸ್ ತನ್ನ ಸಂಪಾದನೆಲಿ ಹೆಂಗೆ ಬೊದ್‌ಕ್‌ತಾ ಒಳೇತ ಒಂದ್ಸಲ ಪುರುಸೊತ್ತ್‌ಲಿ

ಹೇಳಿಕಂಡತ್. "ಬುರ್ನಾಸ್ ಕುಡ್‌ಕ ಗಂಡನ ನಂಬಿದ್ದರೆ ಇಂದ್ ನನ್ನ ಮಕ್ಕಳ ದಸ್ಕತ್ತೂ ಹೆಬ್ಬೆಟ್ಟಾಗ್‌ತಿತ್ತ್ ಕಂಡದೆ. ಗತಿಗೆಟ್ಟರೂ ಮತಿಗೆಡಿಕಾಗದೂತ ನಾ ನಾಕ್ ಕಾಸ್ ಸಂಪಾದನೆ ಮಾಡ್‌ದರಿಂದಾಗಿ ಮಕ್ಕಳಿಗೆ ವಿದ್ಯೆ ಸಿಕ್ತ್. ನನ್ನಂತ ಪರಿಸ್ಥಿತಿ ಅವ್‌ಕೆ ಬಾರದಂಗೆ ಅವ್‌ರವರ ಕಾಲ್ ಮೇಲೆ ನಿಲ್ಸಿಯೊಳೇತ ಹೇಳ್‌ಕನ, ಅವಳ ದುಡಿಮೆನ ಬಗ್ಗೆ ಅವಳಿಗಿದ್ದ ಹೆಮ್ಮೆ ಅವಳೆರಡ್ ಕಣ್ಣ್‌ಗಳಲಿ ಹೊಳಿತಿತ್ತ್.

ಮೊದುವೆಯಾಕೆ ಮುಂದೆ ಅವರವರ ಕಾಲ್ ಮೇಲೆ ನಿಲ್ಲುದು ಗೂಡೆ-ಹೈದ ಇಬ್ಬರಿಗೂ ಅತ್ಯಂತ ಅಗತ್ಯನೂ ಹೌದು, ಅವಶ್ಯನೂ ಹೌದು. ಕೆಲವ್‌ಕೆ ಮಂಜಂಗೆ ಮೊದುವೆ ಮಾಡ್‌ಸುದೊಂದೇ ಚಿಂತೆ. 'ಆಚೆ ಮನೆ ಅಪ್ಪುಟುಗೆ ಗೂಡೆ ಆತ್‌ಗಡ, ಈಚೆ ಮನೆ ಈಶ್ವರಂಗೆ ಗೂಡೆ ಆತ್‌ಗಡ. ನಮ್ಮವಂಗೂ ಒಂದ್ ಗೂಡೆನ ಗಂಟ್ ಹಾಕಿರೆ ಅವಂಗೆ ಮೂಕ್‌ದಾರ ಬಿದ್ದಂಗೆ'ತ ಭ್ರಮೆಲಿದ್ದವೆ. ಹಂಗೆನೇ ಹರಟೆ ಕಟ್ಟೆಲಿ ಕುದ್ದ್ ಪಟ್ಟಾಂಗ ಹೊಡಿಯವ್ "ನಿಮ್ಮ ಮಂಜಂಗೆ ಗೂಡೆ ನೋಡಿಕೆ ಸುರು ಮಾಡ್‌ದರಿಯಾ? ಮಗಳಿಗೆಲ್ಲಾರೂ ತಂದ್ ಬಂದುಟಾ? ಬೇಗ ಬೇಗ ಗಂಟ್ ಹಾಕಿರೆ ನೀವ್‌ಗೆ ನೆಮ್ಮದಿ ಬಲರಿಯಾ? ಹೆಣ್ಣ್‌ಮಕ್ಕ ಮಡ್ಲ್‌ಲಿ ಕೆಂಡ ಇದ್ದಂಗೆ"ತ ತಲೆಲಿ ಹುಳ ಬುಟ್ಟ. ಒಟ್ಟಾರೆ ಮಂಜ ಅವನ ಕಾಲ್ ಮೇಲೆ ಲಾಯೆಕ್‌ಲಿ ನಿತ್ತುಟಾ? ಅವನೇ ನಂಬಿ ಬಾವ ಹೆಣ್ಣ್‌ನ ಸಣ್ಣಪುಟ್ಟ ಆಸೆಗಳ್‌ನಾದರೂ ಪೂರೈಸಿಕೆ ಅವನ ಕೈಲಿ ಹರ್‌ದದೆನಾ?ತ ನೋಡದೆ ಹಿರಿಯವು ಮಾಡ್ವ ಮೊದುವೆಗಳಂದಾಗಿ ಸಂಸಾರಗಳ್‌ಲಿ ಎಡವಟ್ಟಾದೆ. ಅದ್‌ಕೇ ಕಂಡದೆ "ಅಟ್ಟ ಇಲ್ಲದವಂಗೆ ಮೊದವೆ ಯಾಕೆ?"ತೇಳ್ವ ಗಾದೆ ಹುಟ್ಟಿಕಂಡದ್! ಸರಿಯಾದ ಸಂಪಾದನೆ ಇಲ್ಲದಂವ ತನ್ನ ಕೀಳರಿಮೆನ ಮುಚ್ಚಿಕಣಿಕೆ, ತನ್ನ ಅಹಂನ ಸಾಧಿಸಿಕೆ, ಕೈಲಿ ಬೇರೆಂತ ಹರಿಯದಿದ್ದರೂ ಕಟ್ಟಿಕಂಡವಳ್‌ನ ಹೀಯಾಳ್‌ಸುದೂ, ಹೊಡಿಯೊದು – ಬೊಯ್ಯೊದು ಮಾಡ್‌ದೆ. ಇಂತ ಎಷ್ಟೋ ಸಂಬಂಧಗ ಹಳ್‌ಸಿ ಹೋದನ ನಾವು ಕಂಡವೆ. ಹಂಗಾಗಿ ಯಾರೇ ಆಗಲಿ ನಾಕ್‌ಕಾಸ್ ಕೈಲಿಟ್ಟ್‌ಕಂಡೇ ಮೊದುವೆ ಆದು ಒಳ್ಳೆದ್. ಸಂತಾನ ಬೆಳ್‌ಸುದೊಂದೇ ಜೀವನದ ಉದ್ದೇಸ ಆಕಾಗದ್.

ಇಷ್ಟೇ ಅಲ್ಲ, ನನ್ನ ಅನ್‌ಸಿಕೆನಂಗೆ ಗಾಡಿ (ವಾಹನ) ಓಡ್‌ಸುದು ಸನ 'ಅಸ್ಮಿತೆ'ನ ಕಾಪಾಡಿಕಂಬ ಒಂದ್ ಮುಖ್ಯ ಹೆಜ್ಜೆ. ಇದ್‌ಕೆ ನನ್ನ ಬೊದ್‌ಕ್‌ನ ಅನುಭವನೇ ಸಾಕ್ಷಿ! ನನ್ನ ಮನೆ, ಕಚೇರಿಗ ಎಲ್ಲನೂ

ಮಡಿಕೇರಿಲಿ ಹಕ್ಕಲೆ – ಹಕ್ಕಲೆ ಇದ್ದ ಕಾರಣಂದಾಗಿ, ಸಂಪಾದನೆ ಸಾಕಷ್ಟಿದ್ದರೂ ನಂಗ್ಯಾಕೋ ಸ್ಕೂಟರ್ ಆಗಲೀ, ಕಾರ್ ಆಗಲೀ ನಾನೇ ಓಡ್‌ಸಿಕೆ ಕಲಿಯೊಕೂತ ಮನಸಾತೇ ಇಲ್ಲೆ. ಅದರ್‌ಲೇ ಆಫೀಸಿಗೆ ಹೋಗ್‌ತಿದ್ದರೆ ನಡಿಯಕೆ ಮರ್‌ತೋದೇನೋತ 'ಜೋಕ್' (ಕುಸಾಲು) ಮಾಡ್‌ತಿದ್ದೆ. ಸಿನೇತರ ಬಳಗ, ನೆಂಟಂಗ ಸ್ವಲ್ಪ ಜಾಸ್ತಿನೇ ಇರ್‌ದರಿಂದಾಗಿ ಅವರ ಕಷ್ಟ ಸುಖಕೆಲ್ಲಾ ಹೋಕೂತ ನಂಗಾಸೆ. ಹಂಗೇ ಹೊಸ ಹೊಸ ಜಾಗೆಗಳ್‌ಗೆ ಹೋದು, ತಿರ್‌ಗಾಡ್‌ದು ನಂಗೆ ಕುಸಿ ಕೊಡ್‌ವ ವಿಸ್ಯ. ಆದರೆ ನನ್ನ ಗಂಡ ಅವರ್‌ದೇ ಆದ ಇಪ್ಪತ್ತೆಯ ಕಾರ್‌ಬಾರ್‌ಗಳ್‌ಲಿ ಮುಳುಗಿರ್‌ದರಿಂದಾಗಿ ಬಹಳಷ್ಟ್ ಕಡೆಗೆಲ್ಲಾ ಒಟ್ಟಿಗೇ ಹೋಕೂತ ಕಾದ್‌ಕಂಡ್ ನಂಗೆ ನಿರಾಸೆಯಾಗ್‌ತಿತ್ತ್, ಸಿಟ್ಟ್‌ನೂ ಬರ್‌ತಿತ್ತ್. ಇಂದ್ ಸಮಯ ಸಿಕ್ಕಿಕಿಲೆ. ಬೇಕಾರೆ ಇನ್ಯಾಗಾದರೂ ಪೋಯಿ"ತೇಳ್‌ವ ಮಾತ್ ಅವರ್‌ದ್ ಮಾಮೂಲಾಗಿತ್ತ್. ಸುರು–ಸುರೂಲಿ ಮನ್‌ಸ್‌ಗೆ ಬಾರೀ ಬೇಜಾರ್ ಮಾಡಿಕಣ್‌ತಿದ್ದೆ. ಎಷ್ಟೋ ಜನ್‌ರ್‌ನ ಸೌಖ್ಯ ಇಲ್ಲದಿರ್‌ಕನ ನೋಡಿಕೆ ಹೋಕೂಂತ ಗ್ಯಾನ ಮಾಡ್‌ರೂ ಅವರ ಸಾವುಗೆ ಹೋಗ್‌ವಂಗೆ ಆಗ್‌ತಿತ್ತ್! ಬಾಣಂತಿನ ಮಾತಾಡ್‌ಸಿ ಬರೊಕೂತ ಗ್ಯಾನಮಾಡ್‌ರೆ ಅವ್‌ಳು ಎದ್ದ್ ಗಂಡನ ಮನೆಗೆ ಹೋಗಿಯಾಗಿರ್‌ತಿತ್ತ್! ಉಸಾರಿಲ್ಲದವು ಎದ್ದ್ ಕುದ್ದಾಗಿರ್‌ತಿತ್ತ್! ತೊಟ್ಲುಕೂಸು ನಡಿಯಕೆ ಸುರು ಮಾಡಿರ್‌ತಿತ್ತ್!

ಹಿಂಗಿರ್‌ಕನ ನನ್ನ ಚಾಕ್ರಿಗಾಗಿ ದಿನೋಳು ಕುಶಲನಗರಕೆ ಬಸ್ಸ್‌ಲಿ ಓಡಾಟ ಸುರುವಾತ್. 'ಬಸ್‌ಸ್ಟ್ಯಾಂಡ್' ಕಡೆ ಹೋಕನ ದಾರಿಲಿ ಸಿಕ್ಕಿದ ಗುರ್‌ತದವು, ಬಸ್‌ನ ಕಾಯಕನ ನೋಡ್‌ದ ಕೆಲವಷ್ಟ್ ಆತ್ಮೀಯಂಗ ನನ್ನ ಬಗ್ಗೆ ಕಾಳಜಿಂದ "ಈ ಬಸ್‌ಲಿ ಯಾಗೊಳು ಓಡಾಡುವ ಕೆಲ್‌ಸ ನೀವ್ಯಾಗಪ್ಪಾ? ನೀವ್‌ಗೇನ್ ಕಮ್ಮಿ? ಕಾರ್‌ಲೇ ಹೋಗಿ ಬರಕ್'ತ ಹೇಳ್‌ದ ಮಾತ್, ಕೋವಿಡ್ ಕಾಯಿಲೆ ಬಂದಂಗೆ ನಾ ಕಾರ್ ತಕಂಡ್ ಓಡಾಡಿಕೆ ಸ್ಫೂರ್ತಿಯಾತ್. ಅದರ್‌ಲಿರ್‌ನ ಕುಸಿ ಮತ್ತೆ ನಂಗೆ ಗೊತ್ತಾದ್! ಈ ಅನಗತ್ಯಕಾಗಿ ನನ್ನ ಕೆಲ್‌ಸ–ಕಾರ್‌ಬಾರ್‌ಗಳಿಗೆ ಬೇರೆಯನವ್‌ಕೆ ದುಂಬಾಲು ಬೀಳ್‌ದೂ ಅದ್‌ರಿಂದಾಗಿ ಅವಕಾಶಗಳ್‌ನ ಕಳಕೊಂಬಾದೂ ನಿತ್ತುಟು. ನನ್ನ ಆಸಕ್ತಿನ ಜಾಗೆಗಳ್‌ಗೆ ಹೋಕೆ ಮನ್‌ಸಿಲ್ಲದವರ್‌ನ ಒತ್ತಾಯಲಿ ಹೊರ್‌ಡಿಸಿ ಹಿಂಸೆ ಪಡ್‌ಸುದೂ ಸನ ನಿತ್ತಂಗಾವುಟು. ಸಾದ್ಯಾಕನ ಬೇರೆಯವ್‌ಕೆ ಸಾಯ ಮಾಡಿಕೂ ಆಗ್‌ತಾ ಉಟ್ಟ್.

ಹಂಗಾಗಿ ಯಾರಿಗೆಲ್ಲಾ ವಾಹನ ತಕಂಬ ತಾಕತ್ತ್ ಉಟ್ಟೋ, ಅವು ಖಂಡಕಿತಾ ತಕೊಂಬೊದು ಅವರ ಎಲ್ಲಾ ವೈವಾಟುಗಳ್‌ಗೆ ಬಾರೀ ಒಳ್ಳೆದೂತ ಹೇಳ್‌ವ ಪುಕ್ಕಟೆ ಸಲಹೆನೂ ನಾ ಧಾರಾಳಾಗಿ ಕೊಡ್ತಾ ಒಳೆ. ನನ್ನ ಮಕ್ಕಳಿಬ್ಬರೂ ಎಲ್ಲಾ ತರದ ವಾಹನಗಳ್‌ನ ಓಡ್ಸುವಂಗೆ ಹುರ್ಪು ಕೊಟ್ಟು ಯಶಸ್ವಿಯಾಗೊಳೆ. 'ಎತ್ತ್‌ನ ನಂಬಿ ಬಿತ್ತಿಕಾಗದ್, ನೆಂಟನ ನಂಬಿ ಬದ್‌ಕಿಕಾಗದ್'ತೇಳ್‌ದು ಖಂಡಿತಾ ಸುಳ್ಳಲ್ಲಾತೇಳ್‌ದು ನನ್ನ ಅನುಭವಕೆ ಬಂದುಟು.

ಅಂದಂಗೆ 'ಹಟ್ಟಿಲಿ ಹತ್ತೆಮ್ಮೆ, ಕರಿಯಕೆ ಒಂದೆಮ್ಮೆ'ತ ಇದ್ದರೆ ಒಂದ್ ಕುಟುಂಬ ಉದ್ಧಾರಾದು ಬಾರೀ ಕಷ್ಟ. ಯಾಗೋಳೂ ಬಂಡಾಟನೇ ಬದ್‌ಕಾದೆ. ಪ್ರತಿಯೊಬ್ಬನೂ ಸ್ವಾವಲಂಬಿಯಾಗಿರಿಕೆ ನಿರ್ಧಾರ ಮಾಡೊಕು. ನಮ್ಮ ದೇಸದ ಸರ್ಕಾರ ಸನ ಇದ್‌ಕಾಗೇ ಬೇರೆ ಬೇರೆ ಯೋಜನೆಗಳ್‌ನ ಜಾರಿಗೆ ತಂದುಟು. ಹೆಣ್ಣ್ ಮಕ್ಕ ಬರೀ ಅಡ್‌ಗೆ ಕೋಣೆ, ಸಂಸಾರಕೆ ಮಾತ್ರ ಸೀಮಿತಾಗಿರ್‌ದೆ ದುಡ್ಡ್‌ಕಾಸ್‌ಲಿ ಸ್ವತಂತ್ರಾಗಿರಿಕೆ ಮನಸ್ ಮಾಡ್‌ರೆ ದುಡಿಯಕೆ ಬೇಕಷ್ಟ್ ದಾರಿಗ ಒಳೊ. ಏನೇ ಆದರೂ ನಮ್ಮ ಬೊದ್ಕು ಸಲೀಸಾಕೆ ಚ್ಯಾಮವ್ವ ಹೇಳ್‌ತಿದ್ದಂಗೆ ನಮ್ಮ ಕಾಲ್ ಮೇಲೆ ನಾವ್ ನಿಲ್ಲುದು ಬಾರೀ ಉತ್ತಮ.

**ಕೊಟ್ಟಕೇರಿಯನ ಲೀಲಾ ದಯಾನಂದ**
SDE, BSNL, ಮಡಿಕೇರಿ
ಮೊಬೈಲ್ : 9449858586

# ನಂಜನ ಹನಿಮೂನ್

**ವಿಶ್ವನಾಥ್ ಎಡಿಕೇರಿ.ಜಿ**

ಇದೆಲ್ಲಾ ನಮ್ಮ ಬಾಲ್ಯಲಿ ನಡ್ದ – ಕೇಳ್ದ ಸುದ್ದಿಗ. ನಮ್ಮ ಅಜ್ಜಂದರ್ ಭಾಗಮಂಡಲ ಪರಿಸರನ್ನ ಹೊಟ್ಟೆಪಾಡಿಗಾಗಿ ವಲಸೆ ಹೋರ್ಟ್, ಐನ್ ಮನೆಗಳಂದ ದೂರಹೋಗಿ ನೆಲೆನಿಂತ ಮ್ಯಾಲೆನ ಸಂಗತಿಗ. ನಮ್ಮ ಜನಸಂಖ್ಯೆ ಜಾಸ್ತಿ ಆಗಿ, ರಾಜ ಕೊಟ್ಟ ಭೂಮಿ ಅಣ್ಣ–ತಮ್ಮಂದರಲ್ಲಿ, ಪಾಲ್ – ಪಂಕ್ತಿ ಆಗಿ ಅದ್ ಕಡೆಗೆ ಅಂಗೈ ಅಗಲ ಆಗಿತ್ತ್. ಆಗ, ಕೊಡಗ್ ಜಿಲ್ಲೆನ ಗಡಿಪ್ರದೇಶಗಳಲಿ, ತಿತಿಮತಿ, ಮಾಲ್ದಾರೆ, ಸೋಮವಾರಪೇಟೆ ಕಡೆ ಪೈಸಾರಿ, ದರ್ಕಾಸ್‌ಗಳ ಜಾಗ ನೋಡಿ, ನೀರ್‌ನ ಅನುಕೂಲ ಇರುವ ಕಡೆ ನೆಲೆ ನಿಂತೊ. ಕಾಡ್ ಕಡ್ದ್ ಗದ್ದೆ ಮಾಡಿ, ಬಾಣೆಗಳ ಹೊಲ ಮಾಡಿ ಬತ್ತ, ರಾಗಿ, ತರಕಾರಿ ಅನುಕೂಲ ಇರುವಲ್ಲಿ ಕಾಪಿ–ಒಳ್ಳಮೆಣಸ್ ಬೆಳ್ಸಿದೊ.

ಆ ಕಡೆನ ಕಾಡ್ಗಳಲ್ಲಿ ದೊಡ್ಡ–ದೊಡ್ಡ ಬೀಟಿ, ಬೆಳ್ಳಂದಿ, ಬ್ಯಾಂಗೆ, ಮತ್ತಿ, ತ್ಯಾಗ ಹಿಂಗೆ ಒಳ್ಳೆ ಜಾತಿನ ಮರಗ ತಾನಾಗಿ ಬೆಳ್ಕಂಡ್ ಇದ್ದೊ. ಅವುಗಳ ಬುಡಲಿ, ತಲೆ ಹಾಕಿಕೆ ಬೊತ್ತದಂಗೆ ಮುಳ್ಳು ಗಿಡಗ, ಬಿದ್ರ್, ರೋಜಿ, ಸೀಗೆಬಲ್ಲೆಗ ಬೆಳ್ಕಂಡ್ ಆನೆಗಳಂದ ಹಿಡ್ದ್ ಮೊಲವರೆಗೆ ನೂರೆಂಟ್ ತರದ ಜಾತಿಗ ವಾಸ ಮಾಡ್ತಿದ್ದೊ. ಕಾಡ್ ಕರೆನ ಗದ್ದೆ– ಹೊಲಗಳ ಒಂದು ಪಾಲ್ ಬೆಳೆ ಕಾಡ್ ಹಂದಿ, ಆನೆ–ಸಾರ್ಗಗಳ ಪಾಲಿಗೆ ಹೋಗ್ತಿತ್ತ್. ಹಿಂಗೆ ಅಜ್ಜಂದರ್, ಮಳೆನ ನಂಬಿ ಬೆಳೆ ಬೆಳ್ಸಿಕಂಡ್, ಕಾಡ್ ಪ್ರಾಣಿಗಳಂದ ಕಾಪಾಡಿಕಂಡ್ ಕಷ್ಟಪಟ್ಟರೆ, ಒಂದು ವರ್ಷ ಬೆಳ್ದ ಬೆಳೆನ ಎರ್ಡ್ ವರ್ಷ ಕುದ್ದು ತಿನ್ನುವಷ್ಟ್ ಲಾಯ್ಕ್‌ನ ಫಸಲ್ ಸಿಕ್ಕ್‌ತಿತ್ತ್. ಆ ಸಮಯಲಿ ಅಲ್ಲಿನ ಕಾಡ್ಗಳಲ್ಲಿ ಜೇನ್ ಕುರುಬ ಬುಡಕಟ್ಟ್ ಜನ ವಾಸ ಮಾಡ್ತಿದ್ದೊ. ಅವು ನಮ್ಮಂಗೆ ಒಂದು ಕಡೆ ವಾಸ ಮಾಡದೆ, ಮನೆ, ಆಸ್ತಿ– ಪಾಸ್ತಿ ಮಾಡದೆ ಕಾಡ್ಲಿ ಸಿಕ್ಕುವ ಮೊಲ, ಕೀರಿ, ಕುಡತ, ಕಾಡ್‌ಕೋಳಿ, ಕುಂಡಕೋಳಿ ಹಿಂಗೆ ಸಣ್ಣ–ಪುಟ್ಟ ಜಾತಿನ ಅವರ ಪಟ್ಟೆ ಬಿಲ್ಲ್‌ಲಿ ಹೊಡ್ದ್ ಬೆಂಕಿಲಿ ಸುಟ್ಟ್ ತಿನ್ತಿದ್ದೊ. ಪಟ್ಟೆಬಿಲ್ಲ್‌ತ ಹೇಳಿರೆ ಸಾಮಾನ್ಯ ಬಿಲ್ಲ್ ನಂಗೆ ಬಿದ್ರ್‌ನ ಬೊಗ್ಗಿಸಿ ಮಾಡಿರೂ ಅದರ್ಲಿ ಬಾಣ ಬುಡಿಕೆ ಆದುಲೆ. ಆ ಬಿಲ್ಲಿಗೆ ಎರ್ಡ್ ಹುರಿಹಗ್ಗ ಇದ್ದ್, ಮಧ್ಯಲಿ ಬಾಣ ಇಸುವ ಜಾಗಲಿ ಹುರಿಲಿ

ನೇಯ್ದು ಪಟ್ಟೆ ಇದ್ದದೆ. ಆ ಪಟ್ಟೆಲಿ ಗೋಲಿದಪ್ಪದ ಉರುಟುಕಲ್ಲ್‌ನ ಇಸಿ ಗುರಿ ನೋಡಿ ಎಳ್ದ್ ಬುಟ್ಟರೆ ಸಣ್ಣ–ಪುಟ್ಟ ಜಾತಿ ಪಕ್ಷಿ ಆದೆ. ಇನ್ನ್ ಬಳ್ಳಿನ ಉರುಳು ಮಾಡಿ ಹಾಕಿ ಕಾಡ್‌ಹಂದಿ, ಕ್ಯಾಮ, ಸಾರ್ಗಗಳ ಹಿಡ್ದರೆ ಅಂದ್ ಅವುಕೆ ಕಾಡ್ ಹಬ್ಬ. ಕಾಡ್‌ಲಿ ಒಂದು ಕಡೆ ಮೇಲೇರಿ ನಂಗೆ ಬೆಂಕಿ ಹಾಕಿ ಕೊಂದ ಜಾತಿನ ಸುಟ್ಟ್ ಬೇಯಿಸಿ, ಬೆಂಕಿ ಸುತ್ತ ಕುದ್ದುಕಂಡ್ ತಿಂಬದು ವಿಶೇಷ. ಕಾಡ್‌ಜೇನ್, ಕಾಡ್ ಗೆಣಸ್ ಅವರ ಸಂಪ್ರದಾಯದ ಆಹಾರ. ಅದ್ ಸಿಕ್ಕುವ ಕಾಲಲಿ ಜೇನ್ ಮತ್ತೆ ಗೆಣಸ್ ಸಂಗ್ರಹ ಮಾಡಿ ಅದರ ಊರೊವಿಕೆ ಮಾರಿ, ನಾಲ್ಕ್ ಕಾಸ್ ಸಂಪಾದನೆ ಮಾಡಿ, ಅದರಂದ, ಸೀರೆ–ಬಟ್ಟೆ, ಮಣಿಸರ, ರಿಬ್ಬನ್ ಅಂಗಡಿಗಳಂದ ತಕಣುವಷ್ಟ್ ಅಂದಿಗೆ ನಾಗರಿಕರ್ ಆಗಿದ್ದೊ. ಅದ್ ಬುಟ್ಟರೆ ಕಾಡೇ ಅವರ ಅರಮನೆ! ನಂಜ ಮತ್ತೆ ಗಂಗೆತ ಇಬ್ಬರು ಜೇನ್ ಕುರುಬ ಜನಾಂಗದ ಗಂಡ–ಹೆಣ್ಣ್‌ಗ ಕಾಡ್‌ನ್ದ ಜೇನ್ ತಕಂಡ್ ನಮ್ಮ ಮನೆ ಹಿಂದ್ಗಡೆ ಬಂದ್, ಒಂದು ಕುಕ್ಕೆಯೊಳಗೆ ಜೇನ್ ತೊಟ್ಟಿಕ್ಕ್‌ತಿದ್ದ ಬಿಳಿ–ಬಿಳಿ ಎರಿಗಳ ಅಜ್ಜಿಗೆ ಕೊಡುತ್ತಿದ್ದೊ. ಅಜ್ಜಿ ಆ ಎರಿಗಳ ಹಿಂಡಿ ಜೇನ್‌ನ ಕುಪ್ಪಿಗಳಿಗೆ ತುಂಬುಸಿರೆ, ನಾವು ಮಕ್ಕ ಕುಕ್ಕೆಂದ ಜೇನ್ ಎರಿ ತಕಂಡ್ ತಿಂಬುವ ಕೆಲಸ. ಗಂಗೆ ಅಜ್ಜಿನೊಟ್ಟಿಗೆ ಸುಖ–ದುಃಖದ ಮಾತಾಡಿಕಂಡ್, ಅವ್ವ ಕೊಟ್ಟಿದ್ದ ರೊಟ್ಟಿ ಗೈಪು ತಿಂದ್ ಕಂಡ್ ಗುಂಗುರ್ ಕುದಲ್ ತಲೆನ ಗಳಿಗೆಗೊಮ್ಮೆ ಕೆರಿಕಿಕಂಡ್ ಅಜ್ಜಿನೊಟ್ಟಿಗೆ ಮಾತಾಡ್‌ತಿತ್ತ್. ಜೇನೆರಿ ತಿಂದ್ ಬಿಡ್ದ್ ಹೋಗಿ ಹೊರಗೆ ಹೋದರೆ ಅಲ್ಲಿ ಅಂಗಳಲಿ ನಂಜ ಕುಕ್ಕುರು ಕಾಲ್‌ಲಿ ಕುದ್ದ್‌ಕಂಡ್ ನಮ್‌ಜ್ಜ ಕೊಟ್ಟ ಬೀಡಿನ ಪುಸು–ಪುಸುತ ಸೇದಿದಂಗೆ ಮಾಡಿ, ಅರ್ಧ ಸೇದಿದರ ಕೆಡ್ಸಿ ಜೇಬೊಳಗೆ ಹಾಕಿ, ಅಜ್ಜ ಬೀಸಾಕಿದ ಮೋಟು ಬೀಡಿನ ಹೆರ್ಕಿಕನ್ದ್ ಅದರ ಸೇದಿ ಖುಷಿ ಪಟ್ಟ್‌ಕಂಡ್, ಅಜ್ಜನೊಟ್ಟಿಗೆ ಮಾತಾಡ್‌ತಿತ್ತ್. ಅಷ್ಟೊತ್ತಿಗೆ ಅಜ್ಜಿ ಕೊಟ್ಟ ಜೇನ್ ದುಡ್ಡುನ ಸೆರ್ಗ್‌ನ ಬಾಳೆಕಾಯಿಗಂಟ್‌ಲಿ ಸೆಕ್ಕಿಸಿ ಕಂಡ್ ಗಂಗೆ ಬಂದರೆ, ಇಬ್ಬರೂ ಅವರ ಕಾಡ್ ಕಡೆ ಹೋಗುತ್ತಿದ್ದೋ. ಇದ್ ನಮ್ಮ ಬಾಲ್ಯಲಿ ನೋಡುತಿದ್ದ ನೆನಪುನ ಚಿತ್ರ. ಇಷ್ಟೇ ಆಗಿದ್ದರೆ ನಮಿಗೆ ಜೇನೆರಿ ತಿಂದ ನೆನಪು ಮಾತ್ರ ಉಳ್ದ್ ಆಗಳೇ ಮಧ್ಯ ವಯಸ್ ದಾಟಿದ ದಂಪತಿಗಳ ಗ್ಯಾನ ಮಾಡುವ ಪ್ರಸಂಗ ಬರ್ತಿತ್ತೋ ಇಲ್ಲೆನೋ ಗೊತ್ತ್‌ಲೆ. ಆದರೆ, ನಾವು ಕೇಳಿದ ಅವರಿಬ್ಬರ ಹನಿಮೂನ್ ಪ್ರಸಂಗ ಕಾರಣ ಆಗಾಗ ಗ್ಯಾನ ಆಗ್ತಾ ಇದ್ದದೆ.

ನಂಜ–ಗಂಗೆ ಇಬ್ಬರೂ ಜೇನ್ ಕುರುಬ ಕುಟುಂಬದವು. ಅವರ ಸಂಪ್ರದಾಯದಂಗೆ ವಯಸ್ಸಿಗೆ ಬಂದ ಗಂಡ್–ಹೆಣ್ಣ್ ಪರಸ್ಪರ ಇಷ್ಟ ಆದರೆ, ಅವು ಗುಂಪುನ್ದ ಬೇರೆ ಆಗಿ ವಾರಗಟ್ಟಲೆ ಇಬ್ಬರೇ ಕಾಡ್‌ಲಿ ಸುತ್ತಾಡಿಕಂ, ಬದ್ಕುದು ಪದ್ಧತಿ. ಆಮೇಲೆ ಅವರ ಕುಲದವು ಅವರ್ನ ಕಂಡ್ ಹಿಡ್ದ್, ಅವರ್ನ ಗಂಡ–ಹೆಣ್ಣ್‌ತ ಹೇಳಿ ತೀರ್ಮಾನಿಸಿವೆ. ಹಂಗೆ ಮದುವೆನ ಹೊಸ್ತರಲಿ ನಂಜನೂ ಗಂಗೆನೂ ಕೈ–ಕೈ ಹಿಡ್ಕಂಡ್ ಕಾಡ್ ಸುತ್ತಿ; ಗೆಣ್ಸ್, ಜೇನ್ ತಿಂದ್ಕಂಡ್ ಕಾಲ ಕಳಿಯತ್ತಿದ್ದೊ. ಬುಡಕಟ್ಟ್ ಜನಾಂಗ ಅದರನ್ದ ಅವರ ಮೈಬಣ್ಣ, ಕೆಂಚಿ, ಗುಂಗುರು ತಲೆಕುದಲ್... ಎಣ್ಣೆ ಹಾಕದೆ, ತಲೆ ಬಾಚದೆ ಹುಲ್ಲುಮುಂಡನಂತೆ ಕೆದರಿಕಂಡ್ ಇರ್ತಿತ್ತ್. ಹೆಣ್ಮಕ್ಕ ಸೀರೆನ ಗೇನ್ವಿ ಕಟ್ಟಿ ಕುತ್ತಿಗೆ ತುಂಬಾ ಮಣಿಸರ, ಕಾಡ್ ಹೂವು ತಲೆಗೆ ಮುಡ್ದರೆ ಅವ್ಕ ಸುಂದರಿ. ಗಂಡ್ ಮಕ್ಕ ಒಂದು ಕೋಮಣಕ್ಕಿಂತ ದೊಡ್ಡ; ಆದರೆ ಪಂಚೆಗಿಂತ ಸಣ್ಣ ಮುಂಡುನ ತೊಡೆ ಮುಚ್ಚುವಂಗೆ ಸೊಂಟಕೆ ಸುತ್ತಿಕಂಡ್ ಕೈಲಿ ಒಂದು ಪಟ್ಟೆಬಿಲ್ಲ್ ಹಿಡ್ದರೆ ಅಂವ ಸುರಸುಂದರಾಂಗ. ಸೊಂಟದ ಒಡಿಲಿ ಒಂದು ಮೊಂಡುಕತ್ತಿ ಸಿಕ್ಕಿಸಿಕಂಡಿದ್ದರೆ ಆಂವಂಗೆ ವಿಶೇಷ ಮರ್ಯಾದೆ. ಕಾಲಿಗೆ ಚಪ್ಪಲ್–ಷೂ ಕಂಡವು ಅಲ್ಲ. ಅಲ್ಲದೆ ಸಾದಾರಣ ಕಲ್ಲ್–ಮುಳ್ಳ್ ಅವರ ಕಾಲಿಗೆ ಕೆಂದುದುಲೆ. ಹಂಗೆ ಕಾಡ್ಲಿ ಓಡಾಡಿಕಂಡ್ ಇರ್ಕನ, ಹೊಸಬಿ ಗೂಡೆ ಗಂಗೆನ ಕಾಲಿಗೆ ಎಂತದೋ ವಿಷದ ಮುಳ್ಳ್ ಚುಚ್ಚಿ ಕಾಲ್ ಬಾತ್ ಹೋಗಿತತ್. ನಂಜ ಹೈದ ಅಂವಂಗೆ ಗೊತ್ತಿದ್ದ ಎಕ್ಕದ ಹಾಲ್ ಸೊನೆನ ಅವ್ಳ ಕಾಲಿಗೆ ಹಾಕಿ ಮದ್ದ್ ಮಾಡಿರೂ ಗುಣ ಆಗದೆ ಕುಂಟಿಕಂಡ್ ಗಂಡನೊಟ್ಟಿಗೆ ಕಾಡ್ ಸುತ್ತುತ್ತಾ ಇತ್ತ್. ರಾತ್ರಿ ಬೆಟ್ಟದ ಪಾರೆಕಲ್ಲ್ ಸೆರೆ ಗುಹೆನಂತ ಜಾಗಲಿ, ಬೆಂಕಿ ಹಾಕಂಡ್ ಗೆಣಸ್, ಮೊಲ – ಕುಂಡತ ಸುಟ್ ತಿಂದ್, ಬೆಂಕಿ ಗುಡ್ಡೆ ಹತ್ರ ಮಲಗಿ ರಾತ್ರಿ ಕಳಿತಿದ್ದೊ. ಕಾಡ್‌ಲೇ ಹುಟ್ಟಿ ಬೆಳ್ದ ಕಾಡ್‌ನ ಮಕ್ಕಳಿಗೆ ಪ್ರಾಣಿಗಳ ಹೆದರಿಕೆ ಇರ್‌ತಿತ್ತಲೆ. ಆನೆ, ಹುಲಿ, ಕರಡಿಗಳಂದ ತಪ್ಪುಸಿಕಂಬದು ಅವುಕೆ ನೀರ್ ಕುಡ್ದಷ್ಟ್ ಸುಲಭ. ಈ ವಿಷಯಲಿ ನಾಡ್‌ಲಿ ಇರುವ ನಾವೇ ಪೆದ್ದುಗತ ಹೇಳಕ್. ಮಾತ್‌ಲಿ ಮಾತ್ರ "ಕಾಡಾನೆ ಎದ್‌ರಿಗೆ ಬಂದರೆ ಡೊಂಕು–ಡೊಂಕಾಗಿ ಓಡಕು, ಹಾವುಗ ಬೆರಸಿಕನ್ದ್ ಬಾಕನ ನೆಟ್ಟಂಗೆ ಓಡಿ ತಪ್ಪುಸಿ ಕಣಕು..., ಹುಲಿ–ಕರಡಿ ಎದುರ್ ಬಂದರೆ ಅಲ್ಲಾಡದೆ ನಿಂತ್ ಬುಡೊಕುತ...' ನಮ್ಮ ಮಿಡ್ಲ್ ಸ್ಕೂಲ್ ಮಾಸ್ಟ್ರ ನಮಿಗೆ ಉಪಾಯ ಹೇಳಿ ಕೊಟ್ಟಿತ್ತ್. ಆದರೆ

ಆದ ಕತೆ ಬ್ಯಾರೆ. ಒಂದು ದಿನ ಅದೇ ಮಾಸ್ಟ್ರ ಯಾಗೋಳುನಂಗೆ ಕಾಡ್ ದಾರಿಲಿ ಬೆಳಿಗ್ಗೆ ಅಮ್ಸರ ಅಮ್ಸರಲಿ ಶಾಲೆಗೆ ಬಾಕನ, ರಾತ್ರಿ ಯಾರ್ದೋ ಬತ್ತಗದ್ದೆ ಬೆಳೆ ತಿಂದ್ ನಿಂತಿದ್ದ ಒಂಟಿ ಆನೆ ಎದುರ್ ಸಿಕ್ಕಿ ಸೊಂಡಿಲ್ ಎತ್ತಿ ಅದ್ ಕೊರ್ಚ್ಕನ ಡೊಂಕು – ಡೊಂಕು ಓಡುದು ಹೋಗಲಿ, ಹೆದ್ರಿದ ಮಾಸ್ಟ್ರ ಕೈ–ಕಲ್ ಅಲ್ಲಾಡದೆ ತಪ್ಪುಸಿಕಣಿಕೆ ಆಗದೆ ನಿಂತಿದವರ್ನ ಆ ಒಂಟಿಜ ಆನೆ ಮೆಟ್ಟಿ ಕೊಂದದ್ ನಮ್ಮ ಬಾಲ್ಯಲಿ ನಡ್‌ದ ಭಯಾನಕ ಘಟನೆ, ನೆನಸಿಕಂಡರೆ ಈಗಲೂ ಹೆದರಿಕೆ ಆದೆ.

ಹೊಸಬಿ ಗಂಗೆನ ಕಾಲಿನ ವಿಷಮುಳ್ಳು ಚುಚ್ಚಿ ನಂಜೇರಿ ಕಾಡ್‌ಲಿ ಕುಂಟಿಕಂಡ್ ನಡಿಯುತ್ತಿದ್ದ ಒಂದು ದಿನ ಗಂಡ ನಂಜ ಎರ್ಡ್ ಹೆಜ್ಜೆ ಮುಂದೆ ಇತ್ತ್. ಅಂವಂಗೆ ಏನೋ ಸಿಂಡ್ ವಾಸನೆ ಬಂದ್ ಹಕ್ಕಲೇ ಇದ್ದ ಕೊಕ್ಕರ್ಚಿಬಲ್ಲೆ ನೋಡಿರೆ ಅಲ್ಲಿಟ್ಟು...! ಸದ್ದೇ ಮಾಡದೆ ಇವರ್ನ ನೋಡುತ್ತಿದ್ದ ಒಂಟಿ ಕಾಡಾನೆ. "ಒಂಟಿ ಕಾಡಾನೆ, ಗಾಯ ಆದ ಹುಲಿ ಅಪಾಯಕೆ ದಾರಿ"ತ ಅವರ ಅಜ್ಜ ಹೇಳ್ತಿದ್ದ ಮಾತ್ ಗ್ಯಾನಬಾತ್. 'ಓಡುನೆ ಗೂಡೆ'ತ ಹೇಳಿ ನಂಜ ಬಂದ ದಾರಿಲಿ ಹಿಂದಕೆ ಓಡಿಕೆ ಸುರುಮಾಡ್ತ್. ಕಾಲ್ ಬೇನೆಂದ ಗಂಗೆಗೆ ಜೋರಾಗಿ ಓಡಿಕೆ ಆಗ್‌ತಿತ್ಲೆ. ಆನೆ ಹತ್ತ್ ಮಾರ್ ದೂರಲಿ ಕೊರಚಿ ಕಂಡ್, ಇಡೀ ಕಾಡ್‌ನೇ ನಡ್ಗುಸುವಂತೆ ಅವರ ಬೆರಸಿಕನ್ಡ್ ಬರ್ತುಟ್ಟು. ಹೆಣ್ಣ್‌ನ ಪರಿಸ್ಥಿತಿ ನಂಜಂಗೆ ಗೊತ್ತಾತ್. "ಬದ್ಕಿರೆ ಕುಂಡ ದೇವ್ರಿಗೆ ನಾಲ್ಕ್ ಕಾಲ್‌ನ ಬ್ಯಾಟೆ ಒಪ್ಪುಸಿನೆ"ತ ಕೂಡ್ಲೇ ಮನಸ್‌ಲಿ ಒಂದು ಹರಕೆ ಮಾಡಿಕಂಡ್, ಹೆಣ್ಣ್‌ನ ಎತ್ತಿ ಹೆಗಲ್ ಮೇಲೆ ಹಾಕಂಡಂವ; ಎಡಬದಿಲಿದ್ದ ರೋಜಿಬಲ್ಲೆ ಒಳಗೆ ನುಗ್ಗಿತ್. ಕಾಡ್ ಸುತ್ತುಕನ ನೋಡಿ ನೆನಪಿದ್ದ ಮರಕೊಯ್ಯಕೆ ಮಾಡ್ದ ಹಳೆದಡೆಗುಂಡಿ, ಅಂವನ ಹರಕೆ ಕಾರಣಂದ ನೆನಪಾಗಿ ಅತ್ತ ತಿರ್ಗ್‌ಕನ, ಆನೆ ಸೀದಾ ಮುಂದೆ ಓಡಿ, ನರಮಂಶರ ವಾಸನೆ ಜಾಡ್ ತಪ್ಪಿಹೋಗಿ ಗಾಳಿಲಿ ಸೊಂಡಿಲೆತ್ತಿ ಮೂಸುತ್ತಿತ್ತ್.

ಗಿಡ–ಬಳ್ಳಿಗಳಂದ ಮುಚ್ಚಿಹೋಗಿದ್ದ ದಡೆಗೊಂಡಿ ಒಳಗೆ ಮೆಲ್ಲಂಗೆ ಹೆಣ್ಣ್‌ನ ಇಳಿಸಿ, ಸದ್ದ್ ಮಾಡದೆ ಕುದ್ದುಕಣಿಕೆ ಕೈಸನ್ನೆ ಮಾಡಿದ ನಂಜ, ಓಡಿಹೋಗಿ ಒಂದು ದೊಡ್ಡ ಮರ ಹತ್ತಿ ಕುದ್ದದಕ್ಕೂ, ಲಟ–ಲಟಾತ ಗೆಲ್ಲ್‌ಗಳ ಮುರ್ಕಂಡ್ ಆನೆ ಅಲ್ಲಿಗೆ ಬಂದದಕು ಸರಿ ಆತ್. ಮರದ ಮೇಲೆ ಕುದ್ದ ನಂಜಂಗೆ ಈಗ ಹೆದ್ರಿಕೆ ಇಲ್ಲದೆ ಜೋರಾಗಿ ಬೊಬ್ಬೆ ಹಾಕಿ

ಆನೇನ ದ್ರಿಷ್ಟಿಗೆ ತಾನೇ ಬೀಳುವಂಗೆ ಮಾಡಿ ಕಂಡ್, ಅದ್ ದಡೆಗುಂಡಿ ಕಡೆ ಹೋಗದಂಗೆ ತಡ್ದತ್. ಓಡಿಬಂದ ಆನೆ ನಂಜ ಹತ್ತಿದ ಮರಕೆ ಒಮ್ಮೆ ತಲೆಲಿ ಗುದ್ದ್‌ಕನ ಬೂಮಿ ನಡ್ಗಿದಂಗೆ ಆತ್. ಮರ ದೊಡ್ಡದಾದರಂದ ಬಚಾವು. ಮರಕೆ ಸುತ್ತು–ಸುತ್ತು ಬಂದ್, ಸೊಂಡಿಲ್ ಮೇಲೆ ಮಾಡಿರೂ ಅಂವ ಸಿಕ್ಕದ ಸಿಟ್ಟಿಗೆ ಕೊರಚಿಕನ್ಡ್ ಕೆಳಗೆನ ಗೆಲ್ಲ್ ಮುರ್ದ್ ಬಿಸಾಕಿ; ದಪ–ದಪಾತ ಎರ್ಡ್ ಕುಕ್ಕೆ ಲದ್ದಿ ಹಾಕಿತ್. "ಈ ಆನೆ ಇಂದ್ ಕತ್ತಲಾಗದೆ ಇಲ್ಲಿಂದ ಹೋಕಿಲೆ. ಇದಿಕ್ಕೆ ಉಪಾಯತ ಹೆಳಿರೆ ಮೇಲೆಂದ ಏನಾರ್ ಅದರ ಮೇಲೆ ಬಿಸಾಕಕು"ತ ಗ್ಯಾನ ಮಾಡಿತ್ ನಂಜ. ಬಿಸಾಕಿಕೆ ಅಂವನ ಹತ್ರ ಎಂತ ಉಟ್ಟು? 'ಸೊಂಟಕೆ ಸುತ್ತಿದ ಮುಂಡು, ಹೆಗ್ಲಿಗೆ ಕೋಸಿದ ಪಟ್ಟೆಬಿಲ್ಲ್ ಬುಟ್ಟರೆ ಬರಿಮೈನ ಬೆತ್ತಲೆ ಪಾಂಡಿ'. ಪಟ್ಟೆಬಿಲ್ಲ್ ಬಿಸಾಕಿ ಅದರ ಆನೆ ಮೆಟ್ಟಿ ಮುರ್ದರೆ ಬೇಟೆ ಆಡುದು ಹೆಂಗೆ... ಇನ್ನ್ ಇರುದು, ಕೋಮಣದಂಗೆ ಒಂದು ತುಂಡು ಮುಂಡು. ಅದ್ ಮಣ್ಣ್ ಮೆತ್ತಿ ಮಾಸಿಹೋಗಿ, ಮಳೆಗೆ ನೆಂದ್ ಬಿಸಿಲಿಗೆ ಒಣಗಿ ಕ್ಯಾಮದ ಹಾಳೆನಂಗೆ ಆಗುಟ್ಟು. ಅದ್ ಹೋದರೆ ಅವಂಗೆ ದೊಡ್ಡ ಸಂಗತಿ ಏನ್ ಅಲ್ಲ; ಬ್ಯಾರೆ ಏನಾದ್ರ್ ಏರ್ಪಾಡ್ ಮಾಡಿಕಣಕ್‌ತ ಗ್ಯಾನ ಮಾಡಿದ ನಂಜ ಸೊಂಟಲಿದ್ದ ಕೋಮಣಮುಂಡುನ ಬಿಚ್ಚಿ ಆನೆನ ತಲೆ ಮ್ಯಾಲೆ ಬಿಸಾಕಿತ್. ಒಣಗಿದ ಅಡಿಕೆ ಹಾಳೆ ಬಿದ್ದಂಗೆ ಸದ್ದಾದ ಮುಂಡುನ ಸೊಂಡಿಲ್‌ಲಿ ತಕಂಡ್ ಮೂಸಿ ನೋಡಿದ ಆನೆ ಜೋರಾಗಿ ತಲೆ ಅಲ್ಲಾಡಿಸಿಕಂಡ್, ಅದರ ಹರ್ದ್, ಕಾಲ್ ಕೆಳಗೆ ಹಾಕಿ ಮೆಟ್ಟಿ–ತಿಕ್ಕಿ ಉಂಡೆ ಮಾಡಿ ಬಿಸಾಕಿ; ತಿರ್ಗಿ ನೋಡದೆ ಬಾಲ ಎತ್ತಿಕಂಡ್ ಕಾಡೊಳಗೆ ಓಡಿಹೋತ್. ಅದರ ಗ್ಯಾನ 'ಒಂದು ಮನ್ಸನ ಪಡ್ಚ ಮಾಡಿದೆತ ಆಗಿರಿಕೂ ಸಾಕ್.!"

ಆನೆದ್ ಸದ್ದ್ ಅಡಂಗಿದ ಮೇಲೆ, ಮರಂದ ಇಳ್ದ ನಂಜ ಹಕ್ಕಲೇ ಇದ್ದ ಮುತ್ತುಗದ ಎಲೆಗಳ ಕೊಯ್ದ್ ಮಾಲೆ ಮಾಡಿ ತನ್ನ ಅಜ್ಜಂದರಂಗೆ ಸೊಂಟಕೆ ಕಟ್ಟಿಕಂಡ್ ದಡೆಗುಂಡಿ ಒಳಗೆ ಕುದ್ದಿದ್ದ ಹೆಣ್ಣ್‌ನ ಮ್ಯಾಲೆ ಎಳ್ಕಂಡತ್. ಗಂಡನ ಹೊಸ ಕೋಲ ನೋಡಿದ ಗಂಗೆ, ಸ್ವಲ್ಪ ಹೊತ್ತುನ ಹಿಂದೆ ಇದ್ದ ಜೀವಭಯ ಮರ್ತ್ ಹೋಗಿ ಜೋರಾಗಿ ನೆಗಾಡಿಕೆ ಸುರು ಮಾಡ್ತ್.

---

**ವಿಶ್ವನಾಥ ಎಡಿಕೇರಿ ಜಿ.**

'ತುಳಸಿ', #4/64, ಏಳನೇ ಕ್ರಾಸ್, ಚರ್ಚ್ ಬೃಂದಾವನ ನಗರ, ಮತ್ತಿಕೆರೆ ಪೋಸ್ಟ್–560 054

ಮೊಬೈಲ್ : 6360349938




# ಮಂಜೆಟಿ ಮಣೆ (ಚೆನ್ನಮಣೆ)

**ಎಂ.ಜೆ. ಕಜೆ**

ಮಂಜೆಟಿ ಮಣೆ, ಹಾಗೆಂತೇಳಿರೆ ಮಂಜೆಟಿ ಆಟ ಆಡುವ ಮಣೆ. ಮಳೆಗಾಲಲಿ ಅದೂ ಆಟಿ ತಿಂಗಳ್‌ಲಿ ಜೋರು ಮಳೆ ಬಾಕನ ತೋಟಕೆ, ಗದ್ದೆಗೆ ಹೋಕೆ ಆದುಲೆ. ಆಗ ಮನೆಲಿ ಕುದ್ದು ಕುದ್ದು ಬೇಜಾರ್‌ಆದೆ. ಅಂತಾ ಹೊತ್ತ್‌ಲಿ ಆಟ ಆಡಿಕೆ ಇರುವ ಮಣೆ. ಇದರ್‍ಲಿ ಆಡಿಕೆ ಮಂಜೆಟಿ ಬಿತ್ತ್ ಬೇಕಾದೆ. ಈ ಬಿತ್ತ್ ಮರಲಿ ಆದೆ. ಕೆಂಪು ಬಣ್ಣಲಿ ಜೋಳದ ಬಿತ್ತ್‌ಂದ ಹಞ ಸಣ್ಣದಿದ್ದದೆ. ಹಿಂದೆನ ಕಾಲಲಿ ಚಿನ್ನದ ಆಚಾರಿಗ ಚಿನ್ನ ತೂಗಿಕೆ ಗುಲುಗುಂಜಿ ಬಿತ್ತ್‌ನ ಉಪಯೋಗಿಸ್ತಿದ್ದೊ. ಹೆಚ್ಚ್‌ಕಮ್ಮಿ ಆ ಬಿತ್ತ್‌ನ ಹಾಂಗೇ ಇದ್ದದೆ. ಮಂಜೆಟಿ ಮಣೆ ಕುದ್ರಿಕೆ ಆವ ಮಣೆನ ಹಾಂಗೇ ಇದ್ದದೆ. ಈ ಮಣೆಲಿ ಎರಡ್ ಪುಡೆಗೆ ಏಳೇಳ್ ಗುಂಡಿ ಇದ್ದದೆ. ಎರಡೂ ಕಡೆಲೂ ಅಗಲಕ್ಕೆ ಗುಂಡಿ ಇದ್ದದೆ. ಇದರ್‍ಲಿ ಗೆದ್ದ ಬಿತ್ತ್‌ಗಳ ಹಾಕಿಸುವೆ.

ಇದರ್‍ಲಿ ಮೂರು ನಾಲ್ಕ್ ಬಗೆಲಿ ಆಡುವ ಆಟ ಉಟ್ಟು.



ಒಂದು ಒಬ್ಬನೇ ಆಡುವ ಸೀತೆ ಆಟ. ಒಬ್ಬನೇ ಕುದ್ದ್‌ಕುದ್ದ್ ಬೇಜಾರ್ ಆಕನ ಹೊತ್ತು ಹೋಕೊಡುವ ಆಟ. ಇದರ್ಲಿ ಗುಂಡಿಗೆ ಬಿತ್ತ್ ಹಾಕಿಕನ ಒಂದು ಪುಡೆಲಿ ಒಂದನೇ ಗುಂಡಿಗೆ ಒಂದು ಬಿತ್ತ್ ಇನ್ನೊಂದು ಗುಂಡಿಗೆ ಎರಡ್ ಬಿತ್ತ್ ಮೂರನೇ ಗುಂಡಿಗೆ ಮೂರು ಹೀಂಗೇ ಏಳ್ ಗುಂಡಿಗೆ ಮುಟ್ಟ ತುಂಬಿಸಿ ಇನ್ನೊಂದು  ಪುಡೆಲಿ ಏಳ್, ಆರ್, ಐದ್ ಹೀಂಗೇ ತುಂಬಿಸಿ ಒಬ್ಬನೇ ಆಡ್ದು. ಸುರುಲಿ ಯಾವ ಗುಂಡಿಂದಲೂ ಆಟ ಸುರು ಮಾಡಕ್ ಅದರೆ ತೆಗ್ದ ಗುಂಡಿಗ 'ಒಂದು ಬಿತ್ತ್ ಹಾಕಿ ಉಳ್ದ ಗುಂಡಿಗೂ ಒಂದೊಂದು ಬಿತ್ತ್ ಹಾಕಿಕನ್ ಅಕೇರಿಗೆ ಉಳ್ದ ಒಂದು ಬಿತ್ತ್‌ನ ಹಾಕಿದ ಗುಂಡಿಂದ ಮತ್ತೆ ಎಲ್ಲತೆಗ್ದ್ ಅದ್ಕೂ ಒಂದು ಬಿತ್ತ್ ಹಾಕಿಕನ್ ಅಡ್ತಾ ಹೋಕು. ಇದ್ ಎಷ್ಟ್ ಹೊತ್ತಾದರೂ ಮುಗಿಯದ ಆಟ.

ಇನ್ನೊಂದು ಇಬ್ಬೊರು ಆಡುವ ಆಟ. ಒಂದು ಪುಡೆಗೆ ಒಬ್ಬ ಇನ್ನೊಂದು ಪುಡೆಗೂ ಒಬ್ಬ ಕುದ್ದ್‌ದ್ ಆಡುವ ಕ್ರಮ. ಈ ಆಟಲಿ ಎಲ್ಲಾ ಗುಂಡಿಗೂ ನಾಲ್ಕ್ ನಾಲ್ಕ್ ಬಿತ್ತ್ ಹಾಕೊಕು. ಯಾರಾದರೊಬ್ಬ ಆಟ ಸುರು ಮಾಡೊಕು. ಅವ ಆಟ ಸುರು ಮಾಡಿಕನ ಅವನ ಪುಡೆಲಿರುವ ಗುಂಡಿಂದ ಮಾತ್ರ ಬಿತ್ತ್ ತೆಗೆದು. ಒಂದು ಗುಂಡಿಂದ ಬಿತ್ತ್ ತೆಗ್ದ್ ಅದರ ಮುಂದೆನ ಗುಂಡಿಗೆ ಒಂದೊಂದೇ ಹಾಕನ್ ಬರೊಕು. ಕೈಲಿದ್ದದ್ ಕಾಲಿ ಆಕನ ಅದರ ಮುಂದೆನ ಗುಂಡಿಂದ ಬಿತ್ತ್‌ತೆಗ್ದ್ ಆಟ ಮುಂದರಿಸಿಕನ್ ಹೋಕು. ಆಡಿಕನ್ ಹೋಕನ ಅವನ ಕೈಲಿರುವ ಬಿತ್ತ್ ಕಾಲಿ ಆಕನ ಅದರ ಮುಂದೆನ ಗುಂಡಿ ಕಾಲಿ ಇದ್ದರೆ ಅದರ ಮುಂದೆನ ಗುಂಡಿಲಿದ್ದ ಎಲ್ಲಾ ಬಿತ್ತ್ ಅವಂಗೆ ಸಿಕ್ಕಿದೆ. ಈ ಆಟಲಿ ಯಾರ ಗುಂಡಿಂದ ಒಮ್ಮೆ ಕಾಲಿ ಆಗಿ ನಾಲ್ಕ್ ಬಿತ್ತ್ ಆದರೆ ಅದ್ ಅವನ ಪಾಲಾದೆ. ಅದ್ಕೆ ಬೆಳೆಂತ ಹೇಳುವೆ. ಇಬ್ಬರೂ ಆಡಿ ಅಕೇರಿಗೆ ಎಲ್ಲಾ ಬಿತ್ತ್ ಕಾಲಿ ಆದ ಮೇಲೆ ಅವನವನ ಗುಂಡಿಗಳ್ಗೆ ಮತ್ತೆ ತುಂಬುಸೊಕು. ಆಗ ಮಿನಿ ಅವನ ಗುಂಡಿಗೆ ತುಂಬಿಸಿಕೆ ಬಿತ್ತ್ ಕಮ್ಮಿ ಆದರೆ ಆ ಗುಂಡಿಗೆ ಕಿಚ್ಚಿ ಬೀತ್‌ಂತ ಏನಾರ್ ಬೇರೆ ಕಡ್ಡಿ ಕಾಡ್ ತುಂಬುಸೊಕು. ಅಕೇರಿಗೆ ಯಾರ ಕೈಲಿ ಗುಂಡಿ ತುಂಬುಸುವಷ್ಟ್ ಬಿತ್ತ್ ಒಳ್ತ್‌ಲೆನೋ ಅವ ಸೋತತ್, ಅವಂಗೆ ಮದುವೆಂತ ಹೇಳಿ ತಮಾಸೆ ಮಾಡುವೆ .

ಇಬ್ಬರೇ ಆಡುವ ಆಟಲಿ ಇನ್ನೊಂದು ಆಟ ಉಟ್ಟು. ಇದರ್ಲಿ ಬೆಳೆಂತ ಇಲ್ಲೆ ಆಟ ಆಡಿಕನ್ ಹೋಕನ ಅಕೇರಿಗೆ ಒಂದು ಇರಿಕನ ಹಾಕಿದ

ಗುಂಡಿಂದ ಮತ್ತೆ ತೆಗ್ದ್ ಮುಂದೆನ ಗುಂಡಿಗೆ ತುಂಬುಸ್ತಾ ಹೋದು. ಕೈಲಿದ್ದ ಬಿತ್ತ್ ಮುಗೆಕನ ಎದ್‌ರ್ ಗುಂಡಿ ಕಾಲಿ ಆಗಿದ್ದರೆ, ಅದರ ಮುಂದೆನ ಗುಳಿಲಿದ್ದದ್ ಅವನ ಪಾಲಾದೆ.

ಇನ್ನೊಂದು ಮೂರು ಜನ ಸೇರಿ ಆಡುವ ಆಟ ಉಟ್ಟು. ಇದ್ಕೆ ಅರಸು ಆಟಂತ ಹೇಳುವೆ. ಕೆಲವು ಕಡೆದನಿ ಒಕ್ಕುಲು ಆಟಂತಲೂ ಹೇಳುವೆ. ಇದರ್ಲಿ ಎರಡ್ ಕಡೆನ ಎದ್‌ರ್ ಬದ್‌ರ್ ನಾಲ್ಕ್ ನಾಲ್ಕ್ ಗುಳಿ ಒಬ್ಬೊಬ್ಬಂಗೆ ಆದರೆ ನಡೂಲಿ ಎದ್‌ರ್ ಬದ್‌ರ್ ಇರುವ ಆರ್ ಗುಂಡಿಗ ಅರಸುಗೆ. ಆಟ ಇಬ್ಬೊರು ಆಡುವ ಆಟದ ಹಾಂಗೇ. ಆಟದ ಅಕೇರಿಗೆ ದನಿಗೆ ಒಕ್ಕ್‌ಲ್‌ಗ ಒಂದೊಂದು ಕಾಯಿ ಗೇಣಿ ಅಂತ ಕೊಡೊಕು.

ಇನ್ನೊಂದು ರೀತಿನ ಮಣೆ ಉಟ್ಟು ಅದರ್ಲಿ ಹನ್ನೆರಡ್ ಹನ್ನೆರಡ್ ಗುಂಡಿ ಇದ್ದದೆ.

ಮಂಜೊಟಿ ಆಟಲಿ ಕವಡೆ ಇಸಿಕನ್ ಆಡುವ ಆಟವೂ ಉಟ್ಟು. ಒಟ್ಟುಲಿ ಈ ಆಟ ಆಡಿಕೆ ಬಾರೀ ಚಾತುರ್ಪ್ಯ ಬೇಕು. ಆಡಿಕನ್ ಹೋಕನ ಹೊತ್ತು ಹೋದೇ ಗೊತ್ತಾದುಲೆ.

ಮಂಜೆಟ್ಟಿ ಆಟನ ಗಂಡ ಹೆಣ್ಣ್ ಆಡಿಕೆ ಬೊತ್ತುಂತ ಹೇಳುವೆ. ಯಾಕೆಂತೇಳಿರೆ ಈ ಆಟ ಆಡಿಕನ ಸೋತೊವುಕೆ ಬೇಜಾರ್ ಆದೆ. ಗೆದ್ದಂವ ಹಂಗಿಸಿದೆ. ಆಗ ಜಗಳ ಆಗುವ ಅಲ್ಲರ್ ಕೋಪ ಬರುವ ಸಂಗತಿ ನಡ್ದದೆ, ಅದ್ಕೇ ಆಗಿರ್ದು. ಇದ್ ಮಳೆಗಾಲಲಿ ಮಾತ್ರ ಆಡುವ ಆಟ.

ವಸ್ತು ಸಂಗ್ರಹ : ಸುಬ್ರಹ್ಮಣ್ಯ ಗೌಡ ಕುಂತೂರು
ಚಿತ್ರ : ಶಶಿ 'ಪೊಟೋಜೆನಿಕ್ಸ್' ಸುಳ್ಯ
ಬರಹ :ಎಂ.ಜಿ.ಕಜೆ, ಸುಳ್ಯ

## ಏಪ್ರಿಲ್‌ಂದ ಜೂನ್ ಕೊನೆವರೆಗೆ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನಂದ ನಡ್ದ ಕಾರ್ಯಕ್ರಮಗ:

1. ಜೂನ್ 26ರ ಶನಿವಾರ ಮಡಿಕೇರಿನ ಭಾರತೀಯ ವಿದ್ಯಾಭವನಲಿ ಕರ್ನಾಟಕ ಅರೆಭಾಷೆ ಮತ್ತೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ವತಿಂದ ಡಿಜಿಟಲ್ ಪುಸ್ತಕಗಳ ಲೋಕಾರ್ಪಣೆ ಜಂಭರ ನಡ್‌ತ್. ಕರ್ನಾಟಕ ಅರೆಭಾಷೆ ಸಂಸ್ಕ್ರತಿ ಮತ್ತೆ ಸಾಹಿತ್ಯ ಅಕಾಡಿಮಿನ ಅಧ್ಯಕ್ಷರ್ ಶ್ರೀ ಲಕ್ಷ್ಮೀನಾರಯಣ ಕಜೆಗದ್ದೆವು ಜಂಭರದ ಸಭಾಧ್ಯಕ್ಷತೆನ ವಯಿಸಿದೊ. ಮಾನ್ಯ ಮುಖ್ಯ ಮಂತ್ರಿಗಳ ಇ-ಆಡಳಿತ ವಿಭಾಗದ ಸಲಹೆಗಾರರ್ ಶ್ರೀ ಬೇಳೂರು ಸುದರ್ಶನವು ಡಿಜಿಟಲ್ ಪುಸ್ತಕಗಳನ್ನ ಲೋಕಾರ್ಪಣೆ ಮಾಡ್ದೊ. ಮುಂದೆನ ಜನಗಣತಿಲಿ ಭಾಷೆ ಕಲಂಲಿ ಅರೆಬಾಸೆನ ನಮೂದಿಸುವಂಗೆ ಆಕು, ಈ ಭಾಗಲಿ ಜೀವ ಮತ್ತೆ ಭಾಷಾ ವೈವಿಧ್ಯತೆನ ಜೊತೆಲಿ ಆಧುನಿಕ ಕಾಲದ ಡಿಜಿಟಲ್ ವೈವಿಧ್ಯತೆ ಬಳಸೊಕೊಂಬದು ಅವಶ್ಯಕ ಮತ್ತೆ ಅರೆಬಾಸೆಗೆ ಐಎಸ್‌ಓ ಮಾನ್ಯತೆನ ಪಡ್ಕಂಬಕ್ಕೆ ಪ್ರಯತ್ನ ಮಾಡೊಕು ಅಂತ ಡಿಜಿಟಲ್ ಪುಸ್ತಕನ ಲೋಕಾರ್ಪಣೆ ಮಾಡಿ ಮಾತನಾಡ್ದೊ.

ಕೊಡಗು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್‌ನ ಅಧ್ಯಕ್ಷರ್ ಶ್ರಿಯುತ ಕೇಶವ ಕಾಮತ್ ಅವು ಜಂಭರದ ಮುಖ್ಯ ನೆಂಟ್ರಾಗಿ ಬಂದ್, ಹಿಂದೆ ತಾಳೆಗರಿಲಿ ಬರ್ದ್ ಓದುತಿದ್ದೊ, ನಂತರ ಕಾಗದ ಮುದ್ರಣ ಆಗ್‌ತಿತ್, ಈಗ ಡಿಜಿಟಲ್ ಮಾಧ್ಯಮದ ಬಳಕೆ ಆಗ್‌ತಾವುಟ್ಟು ಅಂತ ಅಭಿಪ್ರಾಯಿಸಿದೊ.

ಜಂಭರದ ಇನ್ನೊಬ್ಬ ನೆಂಟ್ರಾದ ಕೊಡಗು ಗೌಡ ಸಮಾಜ ಒಕ್ಕೂಟದ ಅಧ್ಯಕ್ಷರಾದ ಸೂರ್ತಲೆ ಸೋಮಣ್ಣವು, ಮಾತನಾಡ್‌ತ ಡಿಜಿಟಲ್ ಮಾಧ್ಯಮನ ಬಳಸಿಕಂಡ್ ಭಾಷೆ, ಸಂಸ್ಕ್ರತಿ ಮತ್ತೆ ಸಾಹಿತ್ಯನ ಉಳ್‌ಸಿ, ಬೆಳ್‌ಸ್‌ವ ಹಾಂಗೆ ಆಕು ಅಂತ ಸಲಹೆ ಮಾಡ್ದೊ.

ಕೊಡಗು ಮೈಸೂರು ಕೊಡಗು ಗೌಡ ಸಮಾಜದ ಅಧ್ಯಕ್ಷರ್ ಶ್ರೀ ತೋಟಂಬೈಲು ಮನೋಹರವು ಮಾತನಾಡ್‌ತ ಮುಂದೆ ಅರೆಭಾಷೆ ಸಂಸ್ಕ್ರತಿ ಮತ್ತೆ ಸಾಹಿತ್ಯ ಅಕಾಡೆಮಿ ಹೊರತರ್‌ವ ಎಲ್ಲಾ ಪುಸ್ತಕಗಳನ್ನ ಡಿಜಿಟಲೀಕರಣ ಮಾಡಕು ಅಂತ ಹೇಳ್ದೊ.

ಜಂಭರಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಸದಸ್ಯರಾದ ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ, ಶ್ರೀಮತಿ ಸ್ಮಿತಾಅಮೃತರಾಜ್, ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ, ಶ್ರೀ ಧನಂಜಯ ಅಗೋಲಿಕಜೆ, ಡಾ.ದಯಾನಂದ ಕೂಡಕಂಡಿ, ಶ್ರೀ ಭರತೇಶ ಆಲಸಂಡೆಮಜಲವು ಇದ್ದೊ. ಜಂಭರಲಿ ಶ್ರೀಮತಿ ಪ್ರೇಮ ರಾಘವಯ್ಯವು ಪ್ರಾರ್ಥಿಸಿದೊ, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ರಿಜಿಸ್ಟ್ರಾರ್ ಶ್ರೀ ಚಿನ್ನಸ್ವಾಮಿವು ಸ್ವಾಗತಿಸಿದೊ, ಧನಂಜಯ ಅಗೋಳಿಕಜೆವು ನಿರೂಪಿಸಿ, ಭರತೇಶ ಆಲಸಂಡೆಮಜಲುವು ವಂದಿಸಿದೊ.

# ಕರ್ನಾಟಕ ಅರೆಭಾಷೆ ಮತ್ತು ಸಾಹಿತ್ಯ ಅಕಾಡೆಮಿ

## ಅಧ್ಯಕ್ಷರು ಮತ್ತು ಸದಸ್ಯರ ವಿಳಾಸ

**ಅಧ್ಯಕ್ಷರು**
**ಶ್ರೀ ಲಕ್ಷ್ಮೀ ನಾರಾಯಣ ಕಜೆಗದ್ದೆ**
ಕನಕಮಜಲು ಅಂಚೆ,
ಸುಳ್ಯ ತಾಲೂಕು, ದ.ಕ 574223
ಮೊ.ನಂ 9449082249,
kajegadde@gmail.com

**ಸದಸ್ಯರು**
**ಶ್ರೀಮತಿ ಜಾನಕಿ ಬೈತಡ್ಕ**
#21–16. ರೇಸ್‌ಕೋರ್ಸ್ ರಸ್ತೆ,
ಎಲ್‌ಐಸಿ ಹತ್ತಿರ, ಮಡಿಕೇರಿ, ಕೊಡಗು.
ಮೊ ನಂ 9008571899

**ಶ್ರೀಮತಿ ಸ್ಮಿತಾ ಅಮೃತರಾಜ್**
'ಹಸಿರು'
ಬಾಲೆಂಬಿ ಅಂಚೆ, ಚೆಂಬು ಗ್ರಾಮ
ಮಡಿಕೇರಿ ತಾಲೂಕು
ಮೊ ನಂ 9980402968

**ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ**
ಟಿ.ಜಾನ್ ಲೇಔಟ್,
ಶಕ್ತಿ ಕ್ವಾಟ್ರಸ್
ಮಡಿಕೇರಿ
ಮೊ.ನಂ 9900992360

**ಶ್ರೀ ಎ.ಪಿ. ಧನಂಜಯ ಅಗೋಳಿಕಜೆ**
2ನೇ ಮೊಣ್ಣಂಗೇರಿ ಗ್ರಾಮ
ಮದೆ ಅಂಚೆ,
ಮಡಿಕೇರಿ ತಾಲೂಕು
ಮೊ ನಂ 9449731238

**ಶ್ರೀ ಆನಂದ ದಂಬೆಕೋಡಿ**
ಮೇಘಸಂದ್ಯೆ ಎಸ್ಟೇಟ್,
ಕತ್ತಲೆಕಾಡು ಗ್ರಾಮ,
ಕಡಗದಾಳು ಅಂಚೆ
ಮಡಿಕೇರಿ ತಾಲೂಕು
ಮೊ.ನಂ. : 9448141502

**ಡಾ. ದಯಾನಂದ ಕೂಡಕಂಡಿ**
ಬಿನ್. ಚಂದ್ರಹಾಸ ಕೆ.ಟಿ.
ತಾವೂರು ಗ್ರಾಮ, ಭಾಗಮಂಡಲ
ಮಡಿಕೇರಿ ತಾಲೂಕು
ಮೊ. ನಂ. : 9449766772
dayanandakudakandi@gmail.com

**ಶ್ರೀ ಕುಸುಮಾಧರ ಎ.ಟಿ.**
ಬಿನ್. ತ್ಯಾಂಪಣ್ಣಗೌಡ
ಅಳಿಕೆ ಮಜಲು ಮನೆ
ಕಾಯರ್ತೋಡಿ, ಸುಳ್ಯ
ಮೊ. ನಂ. : 7090133686

**ಡಾ. ವಿಶ್ವನಾಥ ಬದಿಕಾನ**
ಬಿನ್. ಹೂವಪ್ಪಗೌಡ ಬದಿಕಾನ
ನಂ. 9–88/9,
ಪ್ಲಾಟ್ ನಂ.. 407(34)
ಧ್ರುವ ರೆಸಿಡೆನ್ಸಿ, ಎಕ್ಕೂರು,
ಕಂಕನಾಡಿ –575002,
ಮಂಗಳೂರು, ದಕ್ಷಿಣ ಕನ್ನಡ
ಮೊ. ನಂ. : 9449615474

**ಶ್ರೀ ಜಯಪ್ರಕಾಶ್ ಮೋಂಟಡ್ಕ**
ಕೌಸ್ತುಭ ನಿಲಯ, ಬಿಳಿನೆಲೆ ಗ್ರಾಮ
ನೆಟ್ಟಣ ಅಂಚೆ, ಕಡಬ ತಾಲೂಕು
ದಕ್ಷಿಣ ಕನ್ನಡ–574 230
ಮೊ. ನಂ. : 9480293464
7406141591

**ಶ್ರೀ ಪುರುಷೋತ್ತಮ ಕಿರ್ಲಾಯ**
ಬಿನ್. ದೇವಣ್ಣ ಗೌಡ ಕೆ.
ಕಿರ್ಲಾಯ ಮನೆ
ಅರಂತೋಡು ಗ್ರಾಮ ಮತ್ತು ಅಂಚೆ
ಸುಳ್ಯ ತಾಲೂಕು, ದಕ್ಷಿಣ ಕನ್ನಡ
ಮೊ. ನಂ. : 9449770439

**ಡಾ. ಪುರುಷೋತ್ತಮ ಕೆ.ವಿ. ಕರಂಗಲ್ಲು**
'ಚಾಣಕ್ಯ'
ಸರಕಾರಿ ಪ್ರಥಮ ದರ್ಜೆ ಕಾಲೇಜು
ಮುಂಭಾಗ, ಗಾಂಧಿನಗರ,
ಕಾವೂರು,
ಮಂಗಳೂರು, ದ.ಕ–575015.
ಮೊಬೈಲ್ : 9448216070

**ಶ್ರೀ ಭರತೇಶ ಅಲಸಂಡೆಮಜಲು**
ಅಲಸಂಡೆಮಜಲು ಮನೆ
ಕೊಳ್ತಿಗೆ ಗ್ರಾಮ,
ಪುತ್ತೂರು ತಾಲೂಕು
ದಕ್ಷಿಣ ಕನ್ನಡ–574 212,
ಮೊ. ನಂ. : 9008027271

**ಶ್ರೀ ಕಿರಣ್ ಕುಂಬಳಚೇರಿ**
ಬಿನ್. ಕೇಶವ ಕೆ.ಎ. ಕುಂಬಳಚೇರಿ
ಮನೆಪೆರಾಜೆ ಗ್ರಾಮ ಮತ್ತು ಅಂಚೆ
ಮಡಿಕೇರಿ ತಾಲೂಕು,
ಕೊಡಗು ಜಿಲ್ಲೆ
ಮೊ. ನಂ. : 9164069225

ರಿಜಿಸ್ಟ್ರಾರ್
**ಶ್ರೀ ಚಿನ್ನಸ್ವಾಮಿ**
ಸಹಾಯಕ ನಿರ್ದೇಶಕರು
ವಾರ್ತಾ ಇಲಾಖೆ
ವಾರ್ತಾ ಭವನ, ಕೊಡಗು ಜಿಲ್ಲೆ
ಮಡಿಕೇರಿ
ಮೊ: 9945045327

ಅರ್ಥ ಸದಸ್ಯರು
**ಶ್ರೀಮತಿ ಕೆ.ಟಿ. ದರ್ಶನ**
ಸಹಾಯಕ ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಕೊಡಗು ಜಿಲ್ಲೆ, ಮಡಿಕೇರಿ
ಮೊ: 9483110593

## ಅಕಾಡೆಮಿದ್ ಪ್ರಕಟಣೆಗ

1 ಸರ್ಮಾಲೆ : ಎಂ.ಜಿ. ಕಾವೇರಮ್ಮ
2 ಅಜ್ಜಪ್ಪನ ಕತಾ ಭಂಡಾರಂದ ಹೆರ್ಕಿದ ಕತೆಗ : ಎಂ.ಜಿ. ಕಾವೇರಮ್ಮ
3 ಬೇರ್‌ಲಿ ಚಿಗ್‌ರ್ : ಬೈತಡ್ಕ ಜಾನಕಿ ಬೆಳ್ಯಪ್ಪ
4 ಕಂಕುಮ : ಪೂಜಾರೀರ ಜಿ. ಮಾದಪ್ಪ
5 ಬೊಳ್ವಾಕನ ಮುಗ್ತ್ : ವಿದ್ವಾನ್ ಟಿ.ಜಿ. ಮುಡೂರು
6 ಬೇಟೆನ ಬಿರ್ಸ– ಬಡ್ಡಡ್ಕ ಅಪ್ಪಯ್ಯ ಗೌಡ್ರು : ವೇದಾವತಿ ಅನಂತ ಬಡ್ಡಡ್ಕ
7 ಬೆಳ್ಳಿಮುಷ್ಟಿ : ಕಟ್ರತನ ಕೆ. ಬೆಳ್ಯಪ್ಪ
8 ತೋರಣ : ಬಾರಿಯಂಡ ಆರ್. ಜೋಯಪ್ಪ
9 ಬೊಳ್ಪು : ಲೋಕೇಶ್ ಕುಂಚಡ್ಕ
10 ಮತ್ತೆ ಸಿಕ್ಕಿತ್ ಕುಂಕುಮ : ಕಟ್ರತನ ಲಲಿತ ಅಯ್ಯಣ್ಣ
11 ನೆಂಪುಗಳ ರಂಗೋಲಿ : ಎಂ.ಜಿ. ಕಾವೇರಮ್ಮ
12 ಹೊಸ ಬೊದ್ಕ್ : ಉದಯಕುಮಾರಿ ಚೆಂಬು
13 ಸಂಸ್ಕೃತಿ ಸಂಪತ್ತ್ : ಅರೆಭಾಷೆ ಸಂಸ್ಕೃತಿ ಪರಿಚಯ
14 ಬೆಳ್ಳಿ ಚುಕ್ಕೆಗ : ಬೈತಡ್ಕ ಜಾನಕಿ ಬೆಳ್ಯಪ್ಪ
15 ಅನುಭವ ಧಾರೆ : ಹೊದ್ದೆಟ್ಟಿ ಭವಾನಿಶಂಕರ
16 ರುಚಿ : ಅರೆಭಾಷೆ ಸಂಪ್ರದಾಯದ ಅಡಿಗೆ.
17 ಸಫಲ : ಅರೆಭಾಷೆ ಅಕಾಡೆಮಿಯ 2ನೇ ಸಮಿತಿಯ 3 ವರ್ಷಗಳ ಸಾಧನೆ
18 ಬೊದ್ಕ್ : ಎಂ.ಜಿ. ಕಾವೇರಮ್ಮ
19 ನೆಂಪುನ ಜೊಂಪೆ : ವಿನೋದ್ ಮೂಡಗದ್ದೆ
20 ಕಾಡ್‌ನ ಮಕ್ಕ : ಕೆ.ಆರ್. ತೇಜಕುಮಾರ್
21 ಅಪ್ಪ ಹೇಳ್ದ ಹತ್ತ್ ಕತೆಗ : ಭವಾನಿ ಶಂಕರ್ ಅಡ್ತಲೆ
22 ನೆಗೆ ಬೇಕ್ ಕೇದಗೆ ಗೊನೆ ಹಾಂಗೆ : ಡಾ॥ ಕರುಣಾಕರ ನಿಡಂಜಿ
23 ತಬ್ಲಿ ಮಂಜ : ಪಿ.ಜಿ. ಅಂಬೆಕಲ್
24 ಮಿಂಪುಳಿ : ಡಾ॥ ಪುನೀತ್ ರಾಘವೇಂದ್ರ ಕುಂಟುಕಾಡು
25 ಅರೆಬಾಸೆ ವ್ಯಾಕರಣ : ಪ್ರೊ. ಕೆ. ಕುಶಾಲಪ್ಪ ಗೌಡ
26 ಅಪೂರ್ವ ಸಂಗಮ : ಕಟ್ರತನ ಲಲಿತಾ ಅಯ್ಯಣ್ಣ
27 ಪುಂಸ್ತ್ರೀ (ಅರೆಭಾಷೆಗೆ ತರ್ಜುಮೆ) : ಎಂ.ಜಿ. ಕಾವೇರಮ್ಮ
28 ಕಲ್ಯಾಣಸ್ವಾಮಿ (ಅರೆಭಾಷೆಗೆ ತರ್ಜುಮೆ) : ಸಂಗೀತ ರವಿರಾಜ್
29 ಸಾಹೇಬ್ರು ಬಂದವೆ – ಅರೆಬಾಸೆ ರಂಗಪಯಣ
30 ಗಂಗಾವತರಣ – ಭೀಷ್ಮೋದಯ : ಪ್ರೊ. ಕೆ. ಕುಶಾಲಪ್ಪ ಗೌಡ
31 ಮುತ್ತುಮಣಿ – ಕಣಜಾಲ್ ಪೂವಯ್ಯ
32 ಬಲೀಂದ್ರನ ಸಂಧಿ (ಅರೆಭಾಷೆಗೆ ತರ್ಜುಮೆ) : ಕುಂಞೇಟಿ ಶಿವರಾಮ ಗೌಡ

33 ಯಾಕೀ ಕತೆ ಹೀಂಗಾತ್? : ಕುತ್ಯಾಳ ನಾಗಪ್ಪ ಗೌಡ (ಕಿರಣ)
34 ಪಸ್‌ಲ್–ಮೊದಲನೇ ಅರೆಭಾಷೆ ಸಾಹಿತ್ಯ ಸಮ್ಮೇಳನ–2019
35 ಐಮರ–ಎರಡನೇ ಅರೆಭಾಷೆ ಸಾಹಿತ್ಯ ಸಮ್ಮೇಳನ–2020
36 ಅಟ್ಟಿ–ಕೊಟ್ಟಕೇರಿಯನ ಲೀಲಾ ದಯಾನಂದ
37 ಅರೆಭಾಷೆ ಗಾದೆಗ–ತೆಕ್ಕಡೆ ಬಿ ಕುಮಾರಸ್ವಾಮಿ
38 ಚೆಂಚಿ–ಬಾರಿಯಂಡ ಜೋಯಪ್ಪ
39. ಗೂಡೆ ಬೇಕಾಗುಟ್ಟು (ನಾಟಕಗಳ ಜೊಂಗೆ) – ಪಿ.ಜಿ. ಅಂಬೆಕಲ್
40. ವೀರಮಣಿ ಕಾಳಗ (ಅರೆಬಾಸೆ ಯಕ್ಷಗಾನ) – ಮೂಲ : ದಿ. ಹಲಸಿನಹಳ್ಳಿ ನರಸಿಂಹ ಶಾಸ್ತ್ರಿ; ಅರೆಬಾಸೆಗೆ – ಡಾ. ಮಾಧವ ಪೆರಾಜೆ
4.1 ಸಾಹೇಬ್ರು ಬಂದವೇ (ಅರೆಬಾಸೆ ನಾಟಕ) – ಮೂಲಲೇಕಕರ್ : ನಿಕೋಲಾಯ್ ಗೊಗೊಲ್; ಮೂಲಕೃತಿ : ದಿ ಇನ್ಸ್‌ಪೆಕ್ಟರ್ ಜನರಲ್; ಕನ್ನಡಕೆ : ಕೆ.ವಿ. ಸುಬ್ಬಣ್ಣ ಮತ್ತೆ ಕೆ.ವಿ. ಅಕ್ಷರ; ಅರೆಬಾಸೆಗೆ : ಜಯಪ್ರಕಾಶ್ ಕುಕ್ಕೇಟಿ
42. ಯಕ್ಷ ಜೊಂಪೆ (ಅರೆಬಾಸೆ ಯಕ್ಷಗಾನ ಪ್ರಸಂಗಗ) ಅರೆಬಾಸೆಗೆ : ಭವ್ಯಶ್ರೀ ಕುಲ್ಕುಂದ




ಜಂಭರದ ನೆಂಟ್ರಾದ ಮೈಸೂರು ಗೌಡ ಸಮಾಜದ ಅಧ್ಯಕ್ಷರ್ ತೋಟಂಬೈಲ್ ಮನೋಹರವು ಮಾತನಾಡ್ತು




ಅಕಾಡೆಮಿನ ಅಧ್ಯಕ್ಷರ್ ಲಕ್ಷ್ಮೀನಾರಯಣ ಕಜೆಗದ್ದೆವು ಮಾತನಾಡ್ತು




ಜಂಭರದ ನೆಂಟ್ರುಗಳೊಟ್ಟಿಗೆ ಅಕಾಡೆಮಿನ ಅಧ್ಯಕ್ಷರ್, ಸದಸ್ಯರ್ ಮತ್ತೆ ರಿಜಿಸ್ಟಾರ್

**HINGARA AREBHASHE QUARTERLY VOLUME-5, ISSUE-2**
**DATE : 30-06-2022 KODAGU KARARB/2016/69571 PRICE : RS. 20/- PAGES : 80**



ಮುಖ್ಯಮಂತ್ರಿಗಳ ಇ–ಆಡಳಿತ ಸಲಹೆಗಾರರ್ ಶ್ರೀ ಬೇಳೂರು ಸುದರ್ಶನವು
ಡಿಜಿಟಲ್ ಪುಸ್ತಕಗಳ್ನ ಲೋಕಾರ್ಪಣೆ ಮಾಡ್ದು




ಅಕಾಡೆಮಿನ ರಿಜಿಸ್ಟ್ರಾರ್ ಚಿನ್ನಸ್ವಾಮಿಯವು ಜಂಭರಕ್ಕೆ ನೆಂಟ್ರಗಳ್ನ ಸ್ವಾಗತಿಸುದು




ಶ್ರೀ ಬೇಳೂರು ಸುದರ್ಶನವರ್ನ ಪುಸ್ತಕ ಕೊಟ್ಟು ಸ್ವಾಗತಿಸಿದು

Printed by **Chinnaswamy** on behalf of Registrar, **Karnataka Arebhase Samskruthi Mathu Sahitya Academy** and Published by **Chinnaswamy** on behalf of **Karnataka Arebhase Samskruthi Mathu Sahitya Academy** (name of owner) and Printed at **Aakrithi Prints,** Light House Hill Road, Mangaluru and Published at **Karnataka Arebhase Samskruthi Mathu Sahitya Academy,** Coffee Krupa Building, Ist Floor, Raja Seat Road, Madikeri, Kodagu District. Editor : **Dr. Dayananda Kudakandi**